ಆತ್ಮಹನನಮಪುರುಷಾರ್ಥಃ. ಇತ್ಯನೇನಮೋಕ್ಷಸ್ಯ ಪುರುಷಾರ್ಥತ್ವಮಾಪದ್ಯೇತ. ,,ಸ ಆತ್ಮಾ,, ಇತ್ಯಂತೇನತತ್ತ್ವಂ ಪದಾರ್ಥಂನಿರೂಪ್ಯ ನತತತ್ತ್ವಮಸೀತ್ಯೇವ ವದೇತ್. ದರ್ಪಣಪ್ರತಿಫಲಿತವಹ್ನ್ಯಾದಿವತ್. ಅರ್ಥಕ್ರಿಯಾಕಾರಿತ್ವಂ ನಸಂಭವೇತ್. ತಸ್ಮಾತ್ತೇಽಪಿ ಭಕ್ತಿಮಾರ್ಗಮವಲಂಬ್ಯ ಮುಕ್ತಾಭವೇಯುರಿತ್ಯಸ್ಮಾಕಮಾಶಯಃ. ,,ಅತಏವೋಕ್ತಂಕ್ರಿಯಾಸಾರೆ.,, ,,ಅನೇಕಜನ್ಮಶುದ್ಧಾನಾಂ ಶ್ರೌತಸ್ಮಾರ್ತಾನುವರ್ತಿನಾಂ | ನರಾಣಾಂ ಕ್ಷೀಣಪಾಪಾನಾಂ ಶಿವೇಭಕ್ತಿಃ ಪ್ರಜಾಯತೆ,, ಕಿಂಚ ತತ್ರೈವ ,,ಚತುರ್ವೇದಧರೋವಿಪ್ರಃ ಶಿವಭಕ್ತಿವಿವರ್ಜಿತಃ| ವೇದಭಾರಭರಾಕ್ರಾಂತಃ ಸವೈಬ್ರಾಹ್ಮಣಗರ್ದಭಃ,, ಉಕ್ತಂಚಾನುಭವಸೂತ್ರೆ ,,ಭಕ್ತಿರೇವಪರಮಾರ್ಥದಾಯಿನೀ ಭಕ್ತಿರೇವಪರತತ್ವವೇದಿನೀ | ಭಕ್ತಿರೇವಭವದೋಷಹಾರಿಣೀ ಭಕ್ತಿರೇವ ಶಿವಭಾವಕಾರಿಣೀ ಇತಿ ||೩||

---

ಲಿಸಿದಂತೆ ಕಂಡರೂ ಅದು ಭ್ರಮಾತ್ಮಕ ಜ್ಞಾನವೇ ಹೊರತು ವಾಸ್ತವವಲ್ಲ. ಸೂರ್ಯನು ರೂಪವುಳ್ಳ ಪದಾರ್ಥವಾದುದರಿಂದ ಸೂರ್ಯನಿಂದ ಪ್ರತಿಬಿಂಬವು ಸಿದ್ಧಿಸುವಂತೆ ನೀರೂಪವಾದ ಬ್ರಹ್ಮದಿಂದ ಪ್ರತಿಬಿಂಬಭಾವವು ಸಿದ್ಧಿಸುವುದಿಲ್ಲವು. ಒಂದುಪಕ್ಷ ಬ್ರಹ್ಮವು ನೀರೂಪವಾಗಿದ್ದರೂ ಅವಿದ್ಯೆ ಮಾಯೆಗಳಲ್ಲಿ ಪ್ರತಿಫಲಿಸುವುನು. ಎಂದರೆ—ನೀರೂಪವಾದ ವಾಯುವೂ ಜಲದಲ್ಲಿ ಪ್ರತಿಫಲಿಸಬೇಕಾಗುವುದು. ಕನ್ನಡಿಯಲ್ಲಿರುವ ರೇಖೆಯು ಕನ್ನಡಿಯಲ್ಲಿಯೂ ತೋರುವಂತೆ ಸರ್ವಗತವಾದ ಆಕಾಶವು ಜಲದಲ್ಲಿಯೂ ಇರುವುದರಿಂದ ಜಲದಲ್ಲಿ ಆಕಾಶದ ಪ್ರತಿಫಲನೆಯು ಸಂಭವಿಸುವುದಿಲ್ಲವು. ಬ್ರಹ್ಮವು ಅವಿದ್ಯೆಮಾಯೆಗಳಲ್ಲಿಯೂ ವ್ಯಾಪಕವೇ ಆಗಿರುವುದರಿಂದ ಬ್ರಹ್ಮದಲ್ಲಿ ಬಿಂಬ ಪ್ರತಿಬಿಂಬ ಭಾವಗಳು ಸಿದ್ಧಿಸುವುದಿಲ್ಲವು. ಇದಲ್ಲದೆ ,,ಗುಹಾಂಪ್ರವಿಷ್ಟೌಪರಮೆಪರಾರ್ಧೆ,, ಎಂಬ ಶ್ರುತಿಯಿಂದಲೂ, ,,ಗುಹಾಂಪ್ರವಿಷ್ಟಾವಾತ್ಮಾನೌಹಿ ತದ್ದರ್ಶನಾತ್,, ಎಂಬ ಬ್ರಹ್ಮಸೂತ್ರದಿಂದಲೂ, ಜೀವೇಶ್ವರರಿಬ್ಬರಿಗೂ ಒಂದೇಸ್ಥಲದ ಆಶ್ರಯವಂ ಹೇಳಿರುವುದರಿಂದಲೂ ಬಿಂಬ ಪ್ರತಿಬಿಂಬ ಭಾವವು ಭಿನ್ನಭಿನ್ನಸ್ಥಲದಲ್ಲಿರುವುದರಿಂದಲೂ, ಒಂದೇಸ್ಥಲದಲ್ಲಿ ಬಿಂಬ ಭಾವವನ್ನೂ ಪ್ರತಿಬಿಂಬ ಭಾವವನ್ನೂ ಹೇಳಲಾಗುವದಿಲ್ಲವಾದಪ್ರಯುಕ್ತ ಸರ್ವಗತವಾದ ಬ್ರಹ್ಮಕ್ಕೆ ಬಿಂಬ ಪ್ರತಿಬಿಂಬ ಭಾವವು ಸುತರಾಂ ಸಂಭವಿಸುವುದಿಲ್ಲವು. ಹಾಗೆ ಈ ರೀತಿಯಾದ ಬಿಂಬ ಪ್ರತಿಬಿಂಬಭಾವವನ್ನು ಅಂಗೀಕಾರಮಾಡಿದಪಕ್ಷಕ್ಕೆ ಈ ಅದ್ವೈತಸಿದ್ಧಾಂತಿಗಳಿಂದ ಮುಕ್ತಾವಸ್ಥೆಯಲ್ಲಿ ಅವಿದ್ಯೆಗೂ



ಮೂ॥ ಅನೇಜದೇಕಂ ಮನಸೋ ಜವೀಯೋ ನೈನದ್ದೇವಾ
ಆಪ್ನುವನ್ ಪೂರ್ವಮರ್ಷತ್ | ತದ್ಧಾವತೋಽನ್ಯಾನ
ತ್ಯೇತಿ ತಿಷ್ಠತ್ತಸ್ಮಿನ್ನಪೋ ಮಾತರಿಶ್ವಾ ದಧಾತಿ ॥೪॥

ಶಾಂ || ,,ಉಪಾಸನೈವಸಂಯೋಗಸ್ಸಂಯೋಗೋದ್ವೈತಸಂಲಯಃ,, ಇತ್ಯುಕ್ತರೀತ್ಯಾ ಲಿಂಗಾಂಗಸಂಯೋಗಜ್ಞಾನಾದ್ವೈತಭಕ್ತ್ಯಪರಪರ್ಯಾಯೋಪಾಸನಾ ವಿಷಯಾಕಾಂಕ್ಷಾಯಾಂ. ಧ್ಯೇಯಲಿಂಗಸ್ವರೂಪಂ ಪ್ರತಿಪಾದ್ಯತೆ ಅನೇಜದಿತ್ಯಾದಿನಾ.

---

ಮಾಯೆಗೂ ನಾಶವನ್ನು ಒಪ್ಪುವರು. ಅವಿದ್ಯೆ, ಮಾಯೆ ಎರಡೂ ನಾಶವಾದಲ್ಲಿ ಅವಿದ್ಯಾ ಮಾಯೆಗಳಲ್ಲಿ ಪ್ರತಿಫಲಿಸಿದ ಜೀವನಿಗೂ ಈಶ್ವರನಿಗೂ ನಾಶವನ್ನೇ ಹೇಳಬೇಕಾಗುವದು. ಹಾಗೆ ಹೇಳುವುದಾದರೆ ಜೀವೇಶ್ವರರಿಬ್ಬರ ನಾಶವೆ ಮೋಕ್ಷವೆಂದು ಹೇಳಿದಂತೆಯಾಗುವದು. ಇಷ್ಟಾಪತ್ತಿಯಂದರೆ—ಬೌದ್ಧಮತದೊಡನೆ ಸಾದೃಶ್ಯವು ಸಿದ್ಧವಾಗುವುದಲ್ಲದೆ ಆತ್ಮಹನನರೂಪವಾದ ಅಪುರುಷಾರ್ಥವೆಂಬ ದೋಷವೂ ಪ್ರಸಕ್ತವಾಗುವುದು.

ಕನ್ನಡಿಯಲ್ಲಿ ಪ್ರತಿಫಲಿಸಿದ ಬೆಂಕಿಯು ಬೆಂಕಿಯಂತೆ ತೋರಿದರೂ ವಾಸ್ತವವಾಗಿ ಬೆಂಕಿಯ ಕಾರ್ಯವು ಅದರಲ್ಲಿ ಹ್ಯಾಗಿಲ್ಲವೊ! ಹಾಗೆ ಮಾಯಾವಿದ್ಯೆಗಳಲ್ಲಿ ಪ್ರತಿಫಲಿಸಿದ ಆತ್ಮನು ಕಲ್ಪಿತ ಆತ್ಮರುಗಳೆ ಹೊರತು ವಾಸ್ತವವಾದ ಆತ್ಮರಲ್ಲವೆಂದರೆ, ಈ ಜೀವರಿಗೆ ಪರಲೋಕಸಂಬಂಧವಾದ ಕ್ರಿಯೆಗಳಲ್ಲಿ ಪ್ರಯತ್ನವೇ ಉಂಟಾಗಬಾರದು. ಮೋಕ್ಷಸುಖವನ್ನು ಬಯಸುವ ಜೀವರಿಗೆ ಮುಕ್ತಿಯ ಇಚ್ಛೆಯೇ ಉಂಟಾಗಬಾರದು. ಮಿಥ್ಯೆಯಂಬುವದು ಜಡಭೂತವಾದ್ದರಿಂದಲೂ ಇಚ್ಛಾದಿಗಳು ಚೇತನನಿಷ್ಠಧರ್ಮಗಳಾದುದರಿಂದಲೂ, ಸುಖಕ್ಕೂ ದುಃಖಕ್ಕೂ ಕಾರಣಗಳಾದ ವಿಹಿತ ನಿಷಿದ್ಧಕರ್ಮಗಳಲ್ಲಿ ಪ್ರತಿಬಿಂಬವೆನಿಸಿದ ಜೀವರಿಗೆ ಸಾಮರ್ಥ್ಯವಿಲ್ಲದಿರುವುದರಿಂದ ಜೀವರಿಗೆ ಬ್ರಹ್ಮಸಾಕ್ಷಾತ್ಕಾರವೆಂಬುವುದು ಶಶವಿಷಾಣ, ಗಗನಾರವಿಂದಗಳಂತೆ ಅತ್ಯಂತ ಮಿಥ್ಯಾಸ್ವರೂಪವಾಗುವುದು. ಹಾಗೆ ಅವಿದ್ಯೆಯಲ್ಲಿ ಪ್ರತಿಫಲಿಸಿದ ಜೀವರಿಗೆ ಆತ್ಮತ್ವವಿಲ್ಲದಪಕ್ಷದಲ್ಲಿ ಛಾಂದೋಗ್ಯದಲ್ಲಿ ಹೇಳಿದ ,,ಸದೇವಸೋಮ್ಯೆದಮಗ್ರಆಸೀತ್ ತತ್ವಮಸಿ,, ಎಂದು ಮೊದಲು ತತ್ ಪದಾರ್ಥವನ್ನೂ, ತ್ವಂ ಪದಾರ್ಥವನ್ನೂ ನಿರೂಪಣೆಮಾಡಿದನಂತರ ಕೊ

ಅನೇಜತ್ ಏಜೃಕಂಪನೇ, ನಏಜದಿತ್ಯನೇಜತ್ ಅಕಂಪಮಾನಮಚಲಸ್ಮಹಾ ಲಿಂಗಮಿತ್ಯರ್ಥಃ. ತದೇಕಂ ಸಮಾಧಿಕಶೂನ್ಯಂ „ನತತ್ಸಮಶ್ಚಾಪ್ಯಧಿಕಶ್ಚ ದೃಶ್ಯತೇ.‟ ಇತಿಶ್ರುತೇಃ „ಶಿವಏಕೋಧ್ಯೇಯಃ ಶಿವಂಕರಃ ಸರ್ವಮನ್ಯತ್ಪರಿತ್ಯಜ್ಯ.‟ ಮನಸಃ ಸಂಕಲ್ಪವಿಕಲ್ಪಾತ್ಮಕಾತ್, ಜವೀಯಃ ವೇಗವತ್ತರಂ, ಏನತ್ ಮಹಾಲಿಂಗಂ ದೇವಾಃ ಬ್ರಹ್ಮವಿಷ್ಣ್ವಾದ್ಯಾಃ ನಆಪ್ನುವನ್ ಸಾಕಲ್ಯೇನ ನಪ್ರಾಪ್ತವಂತಃ, ಪೂರ್ವಂ ಕಾರಣಕಾರಣಂ ಮಹಾಲಿಂಗಂ „ಯತೋವಾ ಇಮಾನಿ ಭೂತಾನಿ ಜಾಯಂತೆ.‟ ಇತಿಶ್ರುತೇಃ ಅರ್ಷತ್. ಋಷಗತೌ. ಅರ್ಷತೀತ್ಯರ್ಷತ್. ಚಿತ್ಸ್ವರೂಪಂ ಯೇಚಗತ್ಯರ್ಥಕಾಸ್ತೇಚ ಜ್ಞಾನಾರ್ಥಕಾಃ ಇತಿಪ್ರಸಿದ್ಧೇಃ. ಸತ್ಯಂಜ್ಞಾನಮನಂತಂ ಬ್ರಹ್ಮೇತಿಶ್ರುತೇಃ ತತ್ ಮಹಾಲಿಂಗಂ ತಿಷ್ಠತೀತಿತಿಷ್ಠತ್

---

ನೆಯಲ್ಲಿ „ಅತತ್ವಮಸಿ‟ ಎಂದು ಬೋಧಿಸಬೇಕಾಗಿತ್ತು. ಶ್ರುತಿಯು ಹಾಗೇನೂ ಬೋಧಿಸಲಿಲ್ಲವಾದಪ್ರಯುಕ್ತ ಇವರು ಆತ್ಮವನ್ನು ನಾಶಮಾಡಿಕೊಂಡವರ ವರ್ಗದಲ್ಲಿಯೇ ಸೇರುವರೆಂಬುದೇ ಈ ಗ್ರಂಥಕರ್ತರ ಆಶಯವು.

ಮತ್ತು ಶಿವಭಕ್ತಿಶೂನ್ಯನಾದ ಬ್ರಾಹ್ಮಣನು ನಾಲ್ಕುವೇದಗಳನ್ನು ಅಭ್ಯಾಸಮಾಡಿದ್ದರೂ ಮೂಟೆಯನ್ನು ಹೊರುವ ಪಶುವಿಗೆ ಸಮಾನನೆಂಬುಕ್ತಿಯಿಂದಲೂ, ಪೂರ್ವಜನ್ಮಗಳಲ್ಲಿ ಅನೇಕ ವಿಧವಾದ ಶ್ರುತ್ಯಾಚಾರ, ಸ್ಮೃತ್ಯಾಚಾರಗಳನ್ನು ಅನುಷ್ಠಿಸಿ, ಜೀವರನ್ನು ಆವರಿಸಿರುವ ಅವಿದ್ಯಾರೂಪವಾದ ಮಲಗಳನ್ನು ನಷ್ಟಪಡಿಸಿ, ಪರಿಶುದ್ಧಾತ್ಮರಾದವರಿಗೇನೇ ಶಿವಭಕ್ತಿಯು ಅಂಕುರಿಸುವುದೆಂಬುಕ್ತಿಯಿಂದಲೂ, ಕೇವಲ ಭಾಕ್ತಿಕಮಾರ್ಗವೆಂದೆನಿಸಿದ, ಪರಮ ಪವಿತ್ರವಾದ ಲಿಂಗಾಂಗ ಸಾಮರಸ್ಯ ಬೋಧಕವಾದ ವಿದ್ಯೆಯಲ್ಲಿ ವಿಹರಿಸುವ ಸುರ ಶಬ್ದವಾಚ್ಯವಾದ ವೀರಶೈವ ಮಾರ್ಗವೇ ಮುಕ್ತ್ಯಂಗನೆಗೆ ಆಪ್ತದೂತೀಯಂತೆ ಇರುವುದೆಂಬುದೇ ಈ ಶಾಂಕರೀಕಾರನಿಂದ ಬರೆಯಲ್ಪಟ್ಟ ಈ ಮಂತ್ರದ ವ್ಯಾಖ್ಯಾನದ ಮುಖ್ಯಾಂಶವು. ||೪||

ಅರ್ಥ—ಅನೇಜತ್-ಚಲನೆಯಿಲ್ಲದ ಮಹಾಲಿಂಗವು, ಏಕಂ-ಅದ್ವಿತೀಯವಾದ (ತನಗಿಂತಲೂ ಅಧಿಕ ಅಥವಾ ಸಮವಾಗಿಯು ಇರುವ ವಸ್ತುವಿಲ್ಲದ), ಮನಸಃ-ಸಂಕಲ್ಪ ವಿಕಲ್ಪರೂಪವಾದ ಮನಸ್ಸಿಗಿಂತಲೂ, ಜವೀಯಃ-ಅತ್ಯಂತ ವೇಗವುಳ್ಳದ್ದು, ಏನತ್-ಇದನ್ನು, ದೇವಾಃ-ಬ್ರಹ್ಮಾದಿ ದೇವತೆಗಳು, ನಾಪ್ನುವನ್-ಹೊಂದಲಿಲ್ಲವು. ಪೂರ್ವಂ-ಎಲ್ಲಕ್ಕೂ ಮೂಲಕಾರಣವಾದ, ಅರ್ಷತ್-ಚಿತ್ಸ್ವ



ಸ್ವಸ್ಥಾನೇಸ್ಥಿತಮಪಿ ಸರ್ವಪರಿಪೂರ್ಣತ್ವಾತ್ ಧಾವತಃ ಧ್ರುತಂಗಚ್ಛತಃ. ಅನ್ಯಾನ್ ಮನೋವಾಯ್ವಾದೀನ್ ಅತ್ಯೇತಿ ಅತಿಕ್ರಮ್ಯತಿಷ್ಠತಿ. ಸರ್ವಶಕ್ತಿಕತ್ವಾದಿತ್ಯರ್ಥಃ. ಬ್ರಹ್ಮೈವಂ ಸರ್ವಶಕ್ತಿಕಂ‟ ಇತಿಪೌಷ್ಕರವಚನಾತ್ ಏತಾವತಾ ಸಚ್ಚಿದಾನಂದಾತ್ಮಕ ಮಹಾಲಿಂಗಸ್ಯ ಸರ್ವವ್ಯಾಪಕತ್ವಮುಕ್ತ್ವಾ ತನ್ಮಹಾಲಿಂಗಂ ಭಕ್ತೋಪಾಸನಾರ್ಥಂ ಘೃತಕಾಠಿಣ್ಯನ್ಯಾಯೇನ ಹೃದಯಪುಂಡರೀಕಾದೌಪರಿಚ್ಛಿನ್ನಸ್ವರೂಪಮಪಿ ಧೃತ್ವಾ ಸರ್ವಪ್ರಾಣಿಕರ್ಮಪ್ರೇರಕಂಭವತೀತ್ಯಾಹ, ತಸ್ಮಿನ್ ಮಹಾಲಿಂಗೇಸತಿಮಾತರಿಶ್ವಾ ಮಾತರಿ ಅಂತರಿಕ್ಷೇಶ್ವಯತಿಗಚ್ಛತೀತಿಮಾತರಿಶ್ವಾ ಅರ್ಥಾತ್ ಹೃದಯಾಕಾಶಂ ಗತಂ ಸಕಲನಿಷ್ಕಲಪ್ರಾಣಲಿಂಗಂ ಸರ್ವಾಂತರ್ಯಾಮೀಶ್ವರ ಇತಿಯಾವತ್.

---

ರೂಪವಾದ, ತತ್-ಆ ಬ್ರಹ್ಮಶಬ್ದವಾಚ್ಯವಾದ ಮಹಾಲಿಂಗವು, ತಿಷ್ಠತ್-ತನ್ನ ಸ್ಥಾನದಲ್ಲಿದ್ದರೂ, ಧಾವತಃ-ಓಡುತ್ತಿರುವ, ಅನ್ಯಾನ್-ವಾಯು ಮನಸ್ಸು ಮೊದಲಾದವುಗಳನ್ನು, ಅತ್ಯೇತಿ-ಅತಿಕ್ರಮಿಸಿರುವದು. ತಸ್ಮಿನ್-ಮಹಾಲಿಂಗವು ಹೀಗಿರಲು (ಆದರಾಶ್ರಯದಿಂದ), ಮಾತರಿಶ್ವಾ-ಪ್ರಾಣಲಿಂಗವು, ಅಪಃ-ಚೇಷ್ಟಾರೂಪವಾದ ವ್ಯಾಪಾರವನ್ನು, ದಧಾತಿ-ಧರಿಸುತ್ತದೆ. ಸರ್ವಪ್ರಾಣಿಗಳ ಹೃದಯದಲ್ಲಿದ್ದು ವ್ಯವಹರಿಸುವುದು.

ತಾ|| ಹಿಂದೆ ಎರಡನೆ ಮಂತ್ರದಲ್ಲಿ, ದಹರೋಪಾಸನೆ ಮೊದಲಾದ ಸದ್ಧರ್ಮಗಳನ್ನು ಹೇಳಿ, ದಹರೋಪಾಸನೆಗೆ ವಿಷಯವಾದ ಮಹಾಲಿಂಗದ ಸ್ವರೂಪವು „ಅನೇಜತ್‟ ಎಂಬ ಮಂತ್ರದಿಂದ ಪ್ರತಿಪಾದಿಸಲ್ಪಡುವದು.

ವೇಗವುಳ್ಳ ಪದಾರ್ಥಗಳಲ್ಲಿ ಮೊದಲನೆಯದೆಂದು ಪ್ರಸಿದ್ಧಿಯನ್ನು ಹೊಂದಿರುವ ಯಾವ ಮನಸ್ಸುಂಟೊ, ಆ ಮನಸ್ಸಿಗಿಂತಲೂ ಅತಿಶಯವಾದ ವೇಗವುಳ್ಳದ್ದು, ಪ್ರಪಂಚನಿಷ್ಠ ಪದಾರ್ಥಗಳಂತೆ ಚಾಂಚಲ್ಯಸ್ವಭಾವಶೂನ್ಯವಾದದ್ದು, ತನಗೆ ಸಮವಾದ ವಸ್ತುರಹಿತವಾದದ್ದು, ತನಗಿಂತಲೂ ಅಧಿಕ ಪದಾರ್ಥಶೂನ್ಯವಾದದ್ದು, ಜಗತ್ತಿನ ಸೃಷ್ಟಿಗೂ, ರಕ್ಷಣೆಗೂ, ನಾಶಕ್ಕೂ, ಕಾರಣವಾದ ಸ್ಥಲವೆಂದು ಹೇಳುವ ಆವ ಮಹಾಲಿಂಗವುಂಟೊ, ಈ ಸಕಲಾಧಾರವಾದ ಮಹಾಲಿಂಗದ ಸ್ವರೂಪವನ್ನು ದೇವತೆಗಳು ಕೂಡಾ ನೋಡಲು ಶಕ್ತರಲ್ಲ. ಕಲಹಶಾಂತಿಯನ್ನು ಮಾಡುವ ನಿಮಿತ್ತ ವಿಷ್ಣು ಬ್ರಹ್ಮರ ಮಧ್ಯದಲ್ಲಿ ಕಾಣಿಸಿಕೊಂಡ ಯಾವ ದಿವ್ಯಲಿಂಗದ ಊರ್ಧ್ವಾಧಃ ಪ್ರದೇಶಗಳು ವಿಷ್ಣುಬ್ರಹ್ಮರಿಂದ

«ಈಶ್ವರಸ್ಸರ್ವಭೂತಾನಾಂ ಹೃದ್ದೇಶೇಽರ್ಜುನತಿಷ್ಠತಿ | ಭ್ರಾಮಯನ್
ಸರ್ವಭೂತಾನಿ ಯಂತ್ರಾರೂಢಾನಿ ಮಾಯಯಾ» ಇತಿ ಕೃಷ್ಣಗೀತಾವಚನಾ
ತ್. «ತತೋಽವ್ಯಯಾತ್ಮಾ ಸಹರಿಃ ಸ್ವಹೃತ್ಪಂಕಜಶಾಯಿನಂ | ದರ್ಶಯಾಮಾ
ಸದೇವಾನಾಂ ಮುರಾರಿರ್ಲಿಂಗಮೈಶ್ವರಂ» ಇತಿ ವಾಮನಪುರಾಣವಚನಾಚ್,
ಅಪಃ ಕರ್ಮಾಣಿ ಪ್ರಾಣಿನಾಂ ಚೇಷ್ಟಾರೂಪಾಣಿ ದಧಾತಿಧಾರಯತಿ ಅರ್ಥಾ
ತ್ಸರ್ವಪ್ರಾಣಿಹೃದಯಾಂತರ್ವರ್ತೀಸ ಈಶ್ವರಃ ಸರ್ವಪ್ರಾಣಿಕರ್ಮಪ್ರೇರಕೋ
ಭವತೀತ್ಯರ್ಥಃ. ಅತ್ರಕೇಚಿತ್ ದೇವಾಶ್ಚಕ್ಷುರಾದೀಂದ್ರಿಯಾಣೀತಿವದಂತಿ
ಇದಂ ತಾವತ್ತನ್ಮಾಂದ್ಯಂ. ಚಕ್ಷುರಾದ್ಯಂ ತರಂಗಮಾನಸಾಗಮ್ಯತ್ವಮುಕ್ತೇ
ಸುತರಾಂತದ್ಬಹಿರಂಗ ಬಾಹ್ಯೇಂದ್ರಿಯಾ ಗ್ರಾಹ್ಯತ್ವಮುಕ್ತಂ ಭವತೀತಿ. «ಇಂ

---

ಕಾಣಲ್ಪಡಲಿಲ್ಲವೊ, ಬ್ರಹ್ಮಶಬ್ದವಾಚ್ಯವಾದ ಚಿತ್ಸ್ವರೂಪವಾದ ಆ ಮಹಾಲಿಂ
ಗವು ಲೋಕದೋಳ್ ದೀಪವು ಒಂದುಸ್ಥಾನದಲ್ಲಿದ್ದು ಸಕಲ ಪದಾರ್ಥಗಳನ್ನು
ಬೆಳಗುವುದಲ್ಲದೆ, ತಾನೂ ಪ್ರಕಾಶಗೊಳ್ಳುವಂತೆ, ತನ್ನ ಸ್ಥಾನದಲ್ಲಿದ್ದುಕೊಂಡು
ಸಕಲ ಜಡಾಜಡಾತ್ಮಕವಾದ ಪ್ರಪಂಚವನ್ನು ಬೆಳಗುವನಲ್ಲದೆ ತಾನೂ ಪ್ರಕಾಶ
ಮಯನಾಗಿ ಬೆಳಗುವನು.

ಮತ್ತು ದೇವಾಸುರ ಯುದ್ಧದಲ್ಲಿ ದೇವತೆಗಳಿಗೆ ಜಯವು ಸಂಭವಿಸಲು,
ನನ್ನಿಂದ ತನ್ನಿಂದ ಎಂದು ಒಬ್ಬರಿಗೊಬ್ಬರು ಹೋರಾಡಿ ಪ್ರಪಂಚವನ್ನೆಲ್ಲಾ
ಪುನಃ ಉಲ್ಲೋಲಕಲ್ಲೋಲ ಮಾಡುತ್ತಿರುವ ಬ್ರಹ್ಮೇಂದ್ರಾದಿ ದೇವತೆಗಳಿಗೆ
ಸ್ವಸ್ವರೂಪವೆಂದೆನಿಸಿದ ಮಹಾ ಲಿಂಗಾಕೃತಿಯನ್ನು ತಾಳಿದ ಪರಮಾತ್ಮನಿಂದ
ಪರೀಕ್ಷೆಗಾಗಿ ಕೊಡಲ್ಪಟ್ಟ ಒಂದು ಹುಲ್ಲಿನ ಕಡ್ಡಿಯನ್ನೂ ಸಹ ದೇವತೆಗಳಲ್ಲಿ
ಒಬ್ಬರೂ ಎತ್ತಲಾರದೆ ದಹಿಸಲೂ ಶಕ್ತಿಸಾಲದೆ ಭಗ್ನಮನೋರಥರಾದರು.

«ಬ್ರಹ್ಮೈವಂ ಸರ್ವಶಕ್ತಿಕಂ» ಮೊದಲಾದ ಅನೇಕ ಪ್ರಮಾಣಗಳಿಂದ
ಸರ್ವಶಕ್ತನೂ, ಸರ್ವನಿಯಾಮಕನೂ, ಪ್ರಪಂಚಕಾರಣನೂ, ಸ್ವಭಕ್ತಪಾಲಕ
ನೂ, ಅನಂತ ಕಲ್ಯಾಣಗುಣಾಕರನೂ ಆದ ಮಹಾಲಿಂಗಶಬ್ದವಾಚ್ಯವಾದ ಪರ
ಬ್ರಹ್ಮವು ತನ್ನ ಭಕ್ತರ ಉಪಾಸನಾರ್ಥವಾಗಿ ದ್ರವಾತ್ಮಕವಾದ ತುಪ್ಪವು ಹೆಪ್ಪು
ಗೊಂಡು ಗಟ್ಟಿಗೊಂಡಂತೆ, ಹೃದಯಕಮಲಮಧ್ಯದಲ್ಲಿದ್ದು ಖಂಡವಾದ ಆಕೃತಿ
ಯನ್ನು ಹೊಂದಿ ಸಕಲ ಪ್ರಾಣಿಗಳಿಗೂ ಪ್ರೇರಕನಾಗುವನು. ಈ ವಿಷಯದಲ್ಲಿ
ಉಪನಿಷತ್ತುಗಳು ಪ್ರಮಾಣಗಳಲ್ಲದೆ «ಈಶ್ವರಸ್ಸರ್ವಭೂತಾನಾಂ ಹೃದ್ದೇಶೇ



ದ್ರಿಯೇಭ್ಯಃ ಪರಾಹ್ಯರ್ಥಾಹ್ಯರ್ಥೇಭ್ಯಶ್ಚ ಪರಂಮನಃ ಇತಿಶ್ರುತೇಃ, ಆತ್ಮಾಮನ
ಸಾಸಂಯುಜ್ಯತೇ ಮನ ಇಂದ್ರಿಯೇಣೇಂದ್ರಿಯಮರ್ಥೇನತತಃ ಪ್ರತ್ಯಕ್ಷಂ, ಇತಿ
ನೈಯ್ಯಾಯಿಕನಿಯಮಾಚ್ಚ, ಕಿಮರ್ಥಃ ದೇವಪದಸ್ಯ ಪ್ರಸಿದ್ಧಾರ್ಥಪರಿತ್ಯಾಗಃ.
ಇತಿ ಅನೇನಮಂತ್ರೇಣ ಪರಶಿವಲಿಂಗಸ್ಯ ಪರಿಚ್ಛಿನ್ನಾಪರಿಚ್ಛಿನ್ನಸ್ವರೂಪಂ ಪಾರ
ಮಾರ್ಥಿಕಮುಕ್ತಮಿತ್ಯನುಸಂಧೇಯಂ ||೪||

---

ರ್ಜುನತಿಷ್ಠತಿ| ಭ್ರಾಮಯನ್ ಸರ್ವಭೂತಾನಿ ಯಂತ್ರಾರೂಢಾನಿಮಾಯಯಾ»
ಮೊದಲಾದ ಭಗವದ್ಗೀತೆಯೂ, ಮತ್ತು ನಾರಾಯಣನು ತನ್ನ ಹೃದಯಪಂಕಜ
ಮಧ್ಯದಲ್ಲಿರುವ ಶಿವಲಿಂಗವನ್ನು ದೇವತೆಗಳಿಗೆ ತೋರಿಸಿದನು ಎಂಬ ವಾಮನ
ಪುರಾಣವಾಕ್ಯವೂ ಪ್ರಮಾಣವಾಗಿರುವವು.

ಈ ಮಂತ್ರದಲ್ಲಿ (ದೇವಾಃ) ಎಂಬ ಶಬ್ದವು ಇರುವುದಷ್ಟೆ! ಈ ದೇವ
ಎಂಬ ಶಬ್ದವು ಪ್ರಸಿದ್ಧವಾಗಿ ದೇವತೆಗಳಲ್ಲಿ ಯೋಗರೂಢವಾಗಿದ್ದರೂ ಕೆಲ ಸಿ
ದ್ಧಾಂತದಲ್ಲಿ ಈ ಮಂತ್ರದಲ್ಲಿರುವ ದೇವಶಬ್ದಕ್ಕೆ ದೇವತೆಯೆಂಬ ಅರ್ಥವನ್ನು
ಬಿಟ್ಟು ದೇವ ಶಬ್ದಕ್ಕೆ ಇಂದ್ರಿಯುಗಳೆಂದು ಅರ್ಥಮಾಡುವರು. ಈ ಅರ್ಥವನ್ನು
ಮಾಡುವುದಕ್ಕೆ ಕಾರಣವನ್ನು ಯೋಚಿಸಿದರೆ, ಈ ಸಿದ್ಧಾಂತಿಗಳಿಗೆ ಆದಿತ್ಯ,
ಅಂಬಿಕೆ, ಗಣಪತಿ, ವಿಷ್ಣು, ಮಹಾದೇವ ಈ ಐದು ದೇವತೆಗಳಲ್ಲಿ ನ್ಯೂನಾಧಿಕ
ಭಾವವಿಲ್ಲದಪ್ರಯುಕ್ತ ಸ್ವಸಿದ್ಧಾಂತಕ್ಕೆ ವೈಫಲ್ಯವುಂಟಾಗುವುದರಿಂದಲೂ, ದೇವ
ಶಬ್ದದ ರೂಢ್ಯರ್ಥವನ್ನು ಬಿಟ್ಟಿರಬಹುದು. ಒಂದುವೇಳೆ ಹಾಗೆ ಒಪ್ಪಿಕೊಂಡರೆ,
«ನತತ್ಸಮಶ್ಚಾಪ್ಯಧಿಕಶ್ಚದೃಶ್ಯತೇ» ಶಿವಏಕೋಧ್ಯೇಯಶ್ಶಿವಂಕರಃ» ಯಥಾಚರ್ಮ
ವದಾಕಾಶಂ ಪರಿವೇಷ್ಟಯಿಷ್ಯಂತಿಮಾನವಾಃ| ತದಾಶಿವಮವಿಜ್ಞಾಯ ದುಃಖ
ಸ್ಯಾಂತೊಭವಿಷ್ಯತಿ» ಮೊದಲಾದ ಪರಸಹಸ್ರ ಉಪನಿಷನ್ಮಂತ್ರಗಳಿಗೂ ಉಪ
ಬೃಂಹಣವಾಕ್ಯಗಳಿಗೂ ವಿರೋಧ ಸಂಭವಿಸುವುದಾದಕಾರಣ ದೇವ ಶಬ್ದಕ್ಕೆ
(ಇಂದ್ರಿಯ) ಎಂಬ ಅರ್ಥವನ್ನು ಮಾಡುವದು ಅಸಂಗತವಾಗುವದು.

ಅಥವಾ ಈ ಮಂತ್ರದ ಪೂರ್ವಾರ್ಧದಲ್ಲಿ ಮನಸ್ಸಿಗೂ ಕೂಡಾ ಆ
ಮಹಾಲಿಂಗವು ಗೋಚರವಲ್ಲವು ಎಂದು ಹೇಳಿರುವುದರಿಂದ ಪುನಃ ಬಾಹ್ಯೇಂ
ದ್ರಿಯಗಳಿಗೂ ಆ ಮಹಾಲಿಂಗವು ಗೋಚರವೆಂದು ಹೇಳಬೇಕಾಗಿಲ್ಲವು.
ಲೋಕದಲ್ಲಿ ಸೂಕ್ಷ್ಮವಾದ ಸೂಜಿಗೂ ಪ್ರವೇಶವಿಲ್ಲವೆಂಬ ಮಾತಿನಿಂದಲೇ ಸ್ಥೂ
ಲವಾದ ಗುಬ್ಬಣಕ್ಕೂ ಪ್ರವೇಶವಿಲ್ಲವೆಂದು ಹೇಳುವ ವಚನವು ಹ್ಯಾಗೆ ವ್ಯರ್ಥ

**ಮೂ॥ ತದೇಜತಿ ತನ್ನೈಜತಿ ತದ್ದೂರೆ ತದ್ವದಂತಿಕೆ ತದಂ**
**ತರಸ್ಯ ಸರ್ವಸ್ಯ ತದುಸರ್ವಸ್ಯಾಸ್ಯಬಾಹ್ಯತಃ ॥೫॥**

ಶಾಂ॥ ಸ್ವರೂಪಜ್ಞಾನದಾರ್ಥ್ಯಾರ್ಥಂ ಸಕೃದುಕ್ತಂ ನಚಿತ್ತಮಾರೋಹ ತೀತಿವಾ ಸ್ವರೂಪಮೇವ ಪ್ರತಿಪಾದಯತಿ. ತದೇಜತೀತ್ಯಾದಿನಾ.

ತತ್ ಉಕ್ತಮಹಾಲಿಂಗಂ, ಏಜತಿ-ಚಲತಿ, ಮನ ಆದೀನಾಮಪ್ರಾಪ್ಯತ್ವಾತ್. ತೇಷಾಂಚಲತಾಮಗ್ರ ಏವ ಚಲತೀತ್ಯರ್ಥಃ. ತದೇವ ನೈಜತಿಚ ಸ್ವತಃ ಸ್ಥೂಲಕ್ರಿಯಾರಹಿತತ್ವಾನ್ನೈವಚಲತಿ. ತನ್ಮಹಾಲಿಂಗಂ ದೂರೆ ಅಭಕ್ತಾನಾಂವರ್ಷಕೋಟಿಶತೈರಪ್ಯಪ್ರಾಪ್ಯತ್ವಾತ್ ದೂರಪವತಿಷ್ಠತಿ. ‹‹ಶ್ರದ್ಧಾಭಕ್ತಿ ಧ್ಯಾನಯೋಗಾದವೇಹಿ›› ಧ್ಯಾನನಿರ್ಮಥನಾಭ್ಯಾಸಾತ್ಪಾಶಂಪಹತಿಪಂಡಿತಃ.

---

ವಾಗುವುದೊ, ಅದರಂತೆ ಚಿತ್ಸ್ವರೂಪವಾದ ಮಹಾಲಿಂಗದಲ್ಲಿ ಮನಸ್ಸಿಗೂ ಪ್ರವೇಶಾಸ್ಯಾಧ್ಯತ್ವವಂ ಹೇಳಿದ್ದರಿಂದಲೇ ಬಾಹ್ಯೇಂದ್ರಿಯಗಳಿಗೆ ಅಗೋಚರತ್ವವು ಸಿದ್ಧವಾಗುವಾಗ ಪುನಃ ದೇವಶಬ್ದದ ರೂಢ್ಯರ್ಥವನ್ನು ಏಕೆ ವ್ಯರ್ಥಮಾಡಬೇಕು. ಇದರಿಂದ ಪರಬ್ರಹ್ಮಶಬ್ದವಾಚ್ಯನಾದ ಮಹಾ ಲಿಂಗದಲ್ಲಿರುವ ಪರಿಚ್ಛಿನ್ನತೆಯೂ, ಅಪರಿಚ್ಛಿನ್ನತೆಯೂ, ಪಾರಮಾರ್ಥಿಕಗಳೇ ಹೊರತು ಕಲ್ಪಿತಗಳಲ್ಲವು ಎಂಬುವುದೇ. ಈ ಶಾಂಕರೀ ವ್ಯಾಖ್ಯಾಕಾರನ ಆಶಯವು. ॥೪॥

ಅರ್ಥ—ತತ್-ಆ ಮಹಾಲಿಂಗವು, ಏಜತಿ-ಮನಸ್ಸಿಗಿಂತಲೂ ಮುಂದೆಯೇ ಚಲಿಸುವದು. ತತ್-ಆ ಮಹಾ ಲಿಂಗವು, ನೈಜತಿ-ಚಲಿಸುವುದಿಲ್ಲವು. ತತ್-ಆ ಮಹಾಲಿಂಗವು, ದೂರೆ-ಭಕ್ತರಲ್ಲದವರಿಗೆ ದೂರವಿರುವುದು. ತತ್-ಆ ಮಹಾಲಿಂಗವು, ಅಂತಿಕೆ-ಭಕ್ತರಿಗೆ ಸಮೀಪದಲ್ಲಿರುವುದು. ತತ್-ಆ ಮಹಾಲಿಂಗವು, ಅಸ್ಯ ಸರ್ವಸ್ಯ-ಈ ಸಮಸ್ತ ಜಗತ್ತಿನ, ಅಂತಃ-ಒಳಗೂ ಇರುವದು, ಬಾಹ್ಯತಃ-ಹೊರಗೂ ಇರುವದು.

ತಾ॥ ಬ್ರಹ್ಮಶಬ್ದವಾಚ್ಯವಾದ ಮಹಾಲಿಂಗವು ಮನಸ್ಸು ಮೊದಲಾದ ಇಂದ್ರಿಯಗಳಿಗೆ ಶಿಕ್ಕುವದಿಲ್ಲವು. ಅಂದರೆ ಮನಸ್ಸೆಂಬುವದು ರೆಪ್ಪೆ ಹೊಯ್ಯುವುದರೊಳಗಾಗಿ ಕಾಶೀ ರಾಮೇಶ್ವರ ಮೊದಲಾದ ಸಕಲ ಪ್ರದೇಶಗಳನ್ನು ಸುತ್ತಿಕೊಂಡು ಪುನಃ ತಾನಿದ್ದ ಶರೀರದಲ್ಲಿಯೇ ಸೇರುವದು. ಪ್ರಪಂಚದಲ್ಲಿ ಮನಸ್ಸಿಗಿಂತಲೂ ಹೆಚ್ಚಾಗಿ ಓಡುವ ಪದಾರ್ಥವು ಮತ್ತೊಂದು ದೊರೆಯುವದಿಲ್ಲವು.



ಇತಿಶ್ರುತೇಶ್ಚ. ‹‹ಧ್ಯಾತ್ವಾಮುನಿರ್ಗಚ್ಛತಿ ಭೂತಯೋನಿಂ›› ತಂಧ್ಯಾತ್ವಾ ಮೃತ್ಯುಮತೀತ್ಯನಾನ್ಯಃ ಪಂಥಾವಿಮುಕ್ತಯೆ ಇತಿಚಶ್ರುತೇಃ. ತದು ಮಹಾಲಿಂಗಮೇವ ಅಂತಿಕೆ. ಭಕ್ತಾನಾಂಸಮೀಪಪವತಿಷ್ಠತಿ. ಷಡಂಗಾಶ್ರಿತ ಭಕ್ತಿಯುಕ್ತಸ್ಯತತ್ಸಾಮರಸ್ಯಾಪನ್ನತ್ವಾತ್. ತತ್ ಮಹಾಲಿಂಗಂ ಅಸ್ಯಘಟಾದ್ಯುಪಲಕ್ಷಿತಸ್ಯ ಸರ್ವಸ್ಯಜಗತಃ ಅಂತಃ ‹‹ಯಯಾತ್ಮಾ ಸರ್ವಾಂತರ›› ಇತಿಶ್ರುತೇಃ ಅಂತರ್ಯಾಮಿತ್ವೇನಸ್ಥಿತಮಿತ್ಯರ್ಥಃ. ತದು ತನ್ಮಹಾಲಿಂಗಮೇವ ಸರ್ವಸ್ಯಾಸ್ಯಪ್ರಪಂಚಸ್ಯ ಬಾಹ್ಯತಃ ಬಹಿಃ ಪ್ರದೇಶೆ ವರ್ತತೆ. ‹‹ಅಂತರ್ಬಹಿಶ್ಚ ತತ್ಸರ್ವಂ ವ್ಯಾಪ್ಯನಾರಾಯಣ

---

ಪ್ರತಿಒಂದು ಪದಾರ್ಥವನ್ನು ಮುಟ್ಟಿ ಮುಟ್ಟಿ ಬರುವುದು. ಈ ಮನಸ್ಸಿಗೆ ಶಿಕ್ಕದೆ ಇರುವ ಪದಾರ್ಥವು ಯಾವುದೂ ಇಲ್ಲವು. ಈ ಮನಸ್ಸಿಗಿಂತಲೂ ಬ್ರಹ್ಮಶಬ್ದವಾಚ್ಯವಾದ ಮಹಾಲಿಂಗವು ಅತ್ಯಂತ ವೇಗವುಳ್ಳುದದರಿಂದ ಮನಸ್ಸಿಗೂ ಗೋಚರವಲ್ಲದ್ದು. ಅಂದರೆ ಮನಸ್ಸಿಗಿಂತಲೂ ಮುಂದುವರಿಯುವ ಸಾಮರ್ಥ್ಯವುಳ್ಳದ್ದು.

ಮತ್ತು ಲೋಕದಲ್ಲಿ ಸ್ಥೂಲವಾದ ಕ್ರಿಯೆಗಳನ್ನು ಮಾಡುವ ವಸ್ತುವೆಲ್ಲವೂ ಚಲಿಸುವ ಸ್ವಭಾವವುಳ್ಳುದಾಗಿರುವದು. ಪ್ರಪಂಚಕಾರಣೀಭೂತವಾದ ಈ ಮಹಾಲಿಂಗವು ಸ್ಥೂಲಕ್ರಿಯಾರಹಿತವಾಗಿರುವುದರಿಂದ ಎಲ್ಲಾ ಪದಾರ್ಥಗಳಂತೆ ಚಲಿಸುವ ಸ್ವಭಾವವುಳ್ಳುದಲ್ಲವು. ಇಂಥಾ ಅಪ್ರಕಂಪ್ಯವಾದ ಮಹಾಲಿಂಗವು ಶಿವಭಕ್ತಿಶೂನ್ಯನಾದ ಶಿವದೀಕ್ಷಾರಹಿತನಾದ ಗುರುಕಟಾಕ್ಷವಿದೂರನಾದ ಭಕ್ತನಲ್ಲದವನಿಗೆ ಸುತರಾಂ ದೊರೆಯಲಾರದು.

ವೇಧಾ, ಕ್ರಿಯಾ, ಮನು ಎಂಬ ಮೂರು ದೀಕ್ಷೆಗಳನ್ನು ಪಡೆದು ಮೂರು ಅಂಗಗಳಲ್ಲಿ ಅನಾದಿಕಾಲದಿಂದ ಸಂಬಂಧಿಸಿರುವ ಆಣವ, ಮಾಯಾ, ಕಾರ್ಮಿಕಗಳೆಂಬ ಮೂರು ಮಲಗಳನ್ನು ನಾಶಮಾಡಿಕೊಂಡು ಪರಿಶುದ್ಧಾತ್ಮನಾಗಿ ಶಿವಭಕ್ತಿಎಂಬ ಧ್ಯಾನದಲ್ಲಿ ನಿರತನಾಗಿ ಭಕ್ತಿಸ್ಥಳದಲ್ಲಿ ಇಷ್ಟಲಿಂಗಭೇದವೆನಿಸಿದ ಗುರುಲಿಂಗವನ್ನು ಶ್ರದ್ಧಾಭಕ್ತಿಯಿಂದಾರಾಧಿಸುತ್ತಲೂ, ಮಾಹೇಶ್ವರ ಸ್ಥಲದಲ್ಲಿ ಇಷ್ಟಲಿಂಗಭೇದವೆನಿಸಿದ ಆಚಾರ ಲಿಂಗವನ್ನು ನೈಷ್ಠಿಕಾಭಕ್ತಿಯೆಂಬ ಧ್ಯಾನದಿಂದಾರಾಧಿಸುತ್ತಲೂ, ಪ್ರಸಾಧಿ ಸ್ಥಳದಲ್ಲಿ ಪ್ರಾಣಲಿಂಗ ಭೇದವೆನಿಸಿದ ಶಿವಲಿಂಗವನ್ನು ಅವಧಾನ ಭಕ್ತಿರೂಪವಾದ ಧ್ಯಾನದಿಂದಾರಾಧಿಸುತ್ತಲೂ, ಪ್ರಾಣಲಿಂಗಿಸ್ಥಳದಲ್ಲಿ ಪ್ರಾಣಲಿಂಗ ಭೇದವೆನಿಸಿದ ಜಂಗಮಲಿಂಗವನ್ನು ಅನುಭವಭಕ್ತಿರೂಪವಾದ

ಸ್ಥಿತಃ" ಇತಿಶ್ರುತೇಃ. ಅನೇನಾಪಿಮಂತ್ರೇಣ ಜಗಜ್ಜನ್ಮಾದಿ ಕಾರಣೀಭೂತ ಮಹಾಲಿಂಗಸ್ಯಾಪರಿಚ್ಛಿನ್ನಸ್ಯ ಭಕ್ತಾನುಗ್ರಹಾರ್ಥಂ ಪರಿಚ್ಛಿನ್ನಸ್ವರೂಪಮಪಿ ಪಾರಮಾರ್ಥಿಕಂ ದರ್ಶಿತಮಿತಿಜ್ಞೇಯಂ. ಕೇಚಿತ್ತುತದ್ದೂರೆ ಇತ್ಯಸ್ಯವರ್ಷ ಕೋಟಿ ಶತೈರಪ್ಯವಿದುಷಾಂ ಅಪ್ರಾಪ್ಯತ್ವಾತ್ ದೂರಏವೇತ್ಯಾದ್ಯಾಹುಃ. ಅತ್ರಕಿಂಚಿದ್ವಿಚಾರ್ಯತೆ. ತೇಷಾಮಯಮಾಶಯಃ. ರಜ್ಜುರಯಂ ನಾಯಂ ಸರ್ಪ ಇತಿ ವಾಕ್ಯಜನ್ಯಜ್ಞಾನಾತ್ ಭಯಕಂಪಾದಿ ನಿವೃತ್ತಿರೇವ. "ಸತ್ಯಂಜ್ಞಾನಮನಂತಂ ಬ್ರಹ್ಮ" ಇತ್ಯಾದಿ ಸಿದ್ಧವಸ್ತುಪ್ರತಿಪಾದಕ ವಾಕ್ಯಜನ್ಯ ಸ್ವಸ್ವರೂಪಜ್ಞಾನಾತ್

---

ಧ್ಯಾನದಿಂದಾರಾಧಿಸುತ್ತಲೂ, ಶರಣ ಸ್ಥಲದಲ್ಲಿ ಭಾವಲಿಂಗ ಭೇದವೆನಿಸಿದ ಪ್ರಸಾದಲಿಂಗವನ್ನು ಆನಂದಭಕ್ತಿಯಿಂದಾರಾಧಿಸುತ್ತಲೂ, ಐಕ್ಯಸ್ಥಳದಲ್ಲಿ ಭಾವಲಿಂಗಭೇದವೆನಿಸಿದ ಮಹಾ ಲಿಂಗವನ್ನು ಸಮರಸ ಭಕ್ತಿಯೋಗರೂಪವಾದ ಧ್ಯಾನದಿಂದಾರಾಧಿಸುತ್ತಲೂ ಇರುವವನೇ ಭಕ್ತನೆಂದು ಹೇಳಿಸಿಕೊಳ್ಳುವನು. ಈ ಆರು ಸ್ಥಳಗಳಲ್ಲಿ ಗುರು ಲಿಂಗ ಜಂಗಮ ರೂಪನಾದ ಪರಶಿವನನ್ನು, ಆ ಪರಶಿವನ ಸಂಬಂಧವಾದ ಭಸ್ಮರುದ್ರಾಕ್ಷಾದಿಗಳನ್ನೂ ಸಹಜವಾದ ಭಕ್ತಿಯಿಂದಾರಾಧಿಸುವವನೇ ಭಕ್ತನು. ಈಶ್ವರನೇ ಗುರುಲಿಂಗಜಂಗಮರ ಆಕೃತಿಯನ್ನು ಹೊಂದಿರುವನೆಂಬ ದೃಢತರವಾದ ಭಾವನೆಯುಳ್ಳವನೇ ಮಾಹೇಶ್ವರನು. ಗುರು ಲಿಂಗ ಜಂಗಮರ ತೀರ್ಥಪ್ರಸಾದಗಳಲ್ಲಿಯೂ, ಭಸ್ಮರುದ್ರಾಕ್ಷಾದಿಗಳಲ್ಲಿಯೂ, ಸದಾಚಾರಾದಿ ಐದುವಿಧಗಳಾದ ಆಚಾರಗಳಲ್ಲಿಯೂ ಸ್ವಲ್ಪವೂ ವಿಸ್ಮೃತಿ ಇಲ್ಲದವನೇ ಪ್ರಸಾದಿಯು. ರೋಗಾದಿಗಳು ಸಂಭವಿಸಿದರೂ ಪಾದೋದಕಪ್ರಸಾದ ಹೊರತು, ಮಿಕ್ಕ ಔಷಧವನ್ನು ಸ್ವೀಕರಿಸದವನಾಗಿಯೂ, ಲಿಂಗವೇ ಪ್ರಾಣ, ಪ್ರಾಣವೇ ಲಿಂಗವೆಂದು ತಿಳಿದವನಾಗಿಯೂ ಇರುವವನೇ ಪ್ರಾಣಲಿಂಗಿಯು. ಲಿಂಗವೇ ಪತಿ, ಅಂಗವೇ ಸತಿ ಎಂಬ ಭಾವನೆಯು ಸ್ಥಿರಗೊಂಡು ಬಾಹ್ಯಪ್ರಪಂಚ ಸಂಬಂಧವಾದ ಸತೀ ಪತಿ ಸಂಗ ಶೂನ್ಯವಾಗಿರುವವನೇ ಶರಣನು. ಅಂಗಲಿಂಗಗಳಲ್ಲಿ ಉಂಟಾದ ಸತೀಪತಿ ಭಾವಗಳೆರಡೂ ವಿಲೀನಾವಸ್ಥೆಯನ್ನು ಹೊಂದಿ ನಾನು ನೀನು ಎಂಬ ಭೇದಭಾವನೆಯಿಂದ ಬಿಡಲ್ಪಟ್ಟವನಾಗಿ ನಿರ್ಭಾವಸ್ಥಿತಿಯುಂಟಾಗಿ ಶಿಖೀ ಕರ್ಪೂರಗಳೆರಡರಂತೆ ಸರ್ವಕಾರಣನಾದ ಆ ಮಹಾಲಿಂಗದಲ್ಲಿ ಸಮರಸ ಭಾವವನ್ನು ಹೊಂದಿರುವನೇ ಐಕ್ಯನೆಂದೆನಿಸುವನು. ಈ ರೀತಿಯಾಗಿ ಸಮರಸ ರೂಪವಾದ ಲಿಂಗಾಂಗ ಸಾಮರಸ್ಯವನ್ನು ಹೊಂದುವದು ಬಹುನಾಂ ಜನ್ಮನಾಮಂತೆ



ಅನರ್ಥನಿವೃತ್ತಿಬ್ರಂಹ್ಮಾನಂದಪ್ರಾಪ್ತಿರೂಪಮೋಕ್ಷಏವಭವತಿ. "ತಮೇವಂವಿದಿತ್ವಾತಿಮೃತ್ಯುಮೇತಿ" ನಾನ್ಯಃಪಂಥಾವಿದ್ಯತೆ ಯನಾಯ" ಇತ್ಯಾದಿಶ್ರುತೇಃ. "ಜ್ಞಾನಾದೇವತುಕೈವಲ್ಯಂ ಇತಿಸ್ಮೃತೇಶ್ಚ. ಪೂರ್ವೋಕ್ತಕೈವಲ್ಯಾದಿ ವಾಕ್ಯೇಭ್ಯಶ್ಚ ಅದ್ವೈತಭಕ್ತ್ಯಪರಪರ್ಯಾಯ ಧ್ಯಾನರೂಪೋಪಾಸನೈವ ಮುಕ್ತಿಕಾರಣಮಿತಿಜ್ಞಾಯತೆ. ತಮೇವೇತ್ಯಾದಿವಾಕ್ಯಾತ್ ಸ್ವರೂಪಜ್ಞಾನಮೇವ ಮುಕ್ತಿಕಾರಣಮಿತಿನಿಶ್ಚೀಯತೆ. ಅತ್ರಕೋಯಂ ಮಾರ್ಗೋನುಸರಣೀಯೋ ಮುಮುಕ್ಷುಭಿಃ. ಉಭಯಾನ್ಯತರಸ್ವೀಕಾರೆ ಅನ್ಯತರಸ್ಯಾಪ್ರಾಣ್ಯಾಪತ್ತೇಃ ಪರಸ್ಪರವಿರುದ್ಧಾರ್ಥ ಪ್ರತಿಪಾದಕತ್ವಾತ್ ಉಭಯಸ್ಯಾಪ್ಯಪ್ರಾಮಾಣ್ಯಂಸ್ಯಾತ್. ಸ್ಯಾಚ್ಚ

---

ಜ್ಞಾನವಾನ್ಮಾಂ ಪ್ರಪದ್ಯತೆ" ಎಂಬ ಪ್ರಮಾಣಾನುಸಾರವಾಗಿ ಅನೇಕ ಜನ್ಮಗಳಲ್ಲಿ ಮಾಡಿದ ಶಿವಪೂಜಾ, ಶಿವಭಕ್ತಿ, ಶಿವಧ್ಯಾನ ಮೊದಲಾದ ಸತ್ಕರ್ಮ ಫಲದಿಂದ ಗುರುಕಟಾಕ್ಷವನ್ನು ಹೊಂದಿದ ಭಕ್ತನಿಗೆ ಮಾತ್ರ ಸುಖಸಾಧ್ಯವಲ್ಲದೆ ಉಳಿದವರಿಗೆ ಸಾಧ್ಯವಲ್ಲವು. ಈ ರೀತಿಯಾದ ಭಕ್ತಿಗೇನೆ ಧ್ಯಾನವೆಂದು ಹೇಳುವುದುಂಟು. (ಶ್ರದ್ಧಾಭಕ್ತಿಧ್ಯಾನಯೋಗಾದವೇಹಿ" ಧ್ಯಾನನಿರ್ಮಥನಾಭ್ಯಾಸಾತ್) ಮೊದಲಾದವುಗಳೇ ಪ್ರಮಾಣಗಳು. ಈ ಧ್ಯಾನರೂಪವಾದ ಭಕ್ತಿಯುತರಿಗೆ ಮಹಾಲಿಂಗದ ಸ್ವರೂಪವು ಸನ್ನಿಹಿತವಾಗಿರುವುದು. ಮಹಾಲಿಂಗವು ಸ್ಥಾವರಜಂಗಮಾತ್ಮಕವಾದ ಸಮಸ್ತ ಜಗತ್ತಿನ ಒಳಗೂ ಹೊರಗೂ ವ್ಯಾಪಿಸಿಕೊಂಡಿರುವದು. ಇದರಿಂದ ಮಹಾಲಿಂಗವು ಭಕ್ತಾನುಗ್ರಹಕ್ಕೋಸ್ಕರ ಪರಿಚ್ಛಿನ್ನರೂಪದಿಂದಲೂ, ಸ್ವರೂಪಾವಸ್ಥೆಯಲ್ಲಿ ಅಪರಿಚ್ಛಿನ್ನ ರೂಪದಿಂದಲೂ ಇರುವುದು. ಇದಕ್ಕೆ "ಸರ್ವಾನನ ಶಿರೋಗ್ರೀವಃ" ಸರ್ವವ್ಯಾಪೀಚಭಗವಾನ್" ಮೊದಲಾದ ಶ್ರುತಿಗಳೇ ಪ್ರಮಾಣವೆಂಬುದೇ ಈಗ್ರಂಥಕರ್ತರ ಆಶಯವು.

ಈ ಮಂತ್ರದಲ್ಲಿರುವ ದೂರೆ ಎಂಬ ಪದವನ್ನು ತೆಗೆದುಕೊಂಡು ಅಜ್ಞಾನಿಗಳಿಗೆ ವಸ್ತುವು ದೂರದಲ್ಲಿರುವದೆಂದು ಕೆಲವರು ಅರ್ಥಮಾಡುವರು. ಹಗ್ಗವನ್ನು ಸರ್ಪವೆಂದು ಭ್ರಮಿಸಿ ಭಯಕಂಪಾದಿಗಳನ್ನು ಹೊಂದಿದ ಮನುಷ್ಯನು ಪುನಃ ವಿಚಾರಮಾಡಿ ಇದು ಸರ್ಪವಲ್ಲವು ಹಗ್ಗವೇ ಎಂಬ ಜ್ಞಾನವುಂಟಾದಮೇಲೆ ಮೊದಲುಂಟಾದ ಭಯವು ನಷ್ಟವನ್ನು ಹೊಂದಿ ಸಂತೋಷವು ಸಂಭವಿಸುವಂತೆ "ಸತ್ಯಂಜ್ಞಾನಮನಂತಂ" ಮೊದಲಾದ ವಾಕ್ಯಗಳಿಂದುಂಟಾದ ಜ್ಞಾನದಿಂದ ಅನರ್ಥನಿವೃತ್ತಿಯಾಗಿ ಪರಮಾನಂದ ಪ್ರಾಪ್ತಿರೂಪವಾದ ಮುಕ್ತಿಯು ಅಭಿಸು

ಶ್ರುತಿಸಂಕೋಚೆ ಲಕ್ಷಣಾದಿಸ್ವೀಕಾರೇಚಮಾನಾಭಾವಃ. ತಸ್ಮಾದುಭಯೋರ ಪಿವಾಕ್ಯಯೋಃ ಪ್ರಾಮಾಣ್ಯರಕ್ಷಣಾರ್ಥಂ ವೈದಿಕಂಮನ್ಯಮಾನೇನ ಉಭ ಯೋರಪಿಸಾರ್ಥಕ್ಯಂವಕ್ತವ್ಯಂ. ಏತತ್ಸಾರ್ಥಕ್ಯಂಚ, ಜ್ಞಾನಕರ್ಮಸಮಸಮುಚ್ಚ ಯಂವಿನಾ, ನೈವಸಂಘಟತೆ. ತಸ್ಮಾದೇಕೇನೇವ ಜ್ಞಾನಮಾರ್ಗೇಣಮುಕ್ತ್ಯ ಲಭ್ಯತ್ವಂಜ್ಞೇಯಂ. ಏತದೇವ ವಿದ್ಯಾಂಚಾವಿಂದ್ಯಾಂಚೇತಿಮಂತ್ರ ವ್ಯಾಖ್ಯಾ ಯಾಂವಿಸ್ತರತೋವಕ್ಷ್ಯಮಃ ||೫||

---

ವುದು. ಈ ವಿಷಯದಲ್ಲಿ ‚‚ತಮೇವಂವಿದಿತ್ವಾ'' ಜ್ಞಾನಾದೇವತು ಕೈವಲ್ಯಂ ಮೊದಲಾದ ಉಕ್ತಿಗಳೆ ಪ್ರಮಾಣಗಳೆಂದೂ ಹೇಳುವರು.

ಇಲ್ಲಿ ‚‚ಶ್ರದ್ಧಾಭಕ್ತಿ, !ಧ್ಯಾತ್ವಾಮುನಿಃ, ತಂಧ್ಯಾತ್ವಾ, ಧ್ಯಾನನಿರ್ಮಥ ನಾದೇವ'' ಮೊದಲಾದ ಕೆಲವು ವಾಕ್ಯಗಳಿಂದ ಮುಕ್ತಿಗೆ ಭಕ್ತಿರೂಪವಾದ ಧ್ಯಾ ನವೇ ಕಾರಣವೆಂದೂ ತಂವಿದಿತ್ವಾ ‚‚ಜ್ಞಾನಾದೇವತು'' ಮೊದಲಾದ ವಾಕ್ಯಗ ಳಿಂದ ಮುಕ್ತಿಗೆ ಜ್ಞಾನವೇಕಾರಣವೆಂದು ಹೇಳಲ್ಪಡುವವು. ಏಕರೂಪವಾದ ಶ್ರು ತಿಯಲ್ಲಿ ಪರಸ್ಪರ ವಿರೋಧಗಳಾದ ಅಭಿಪ್ರಾಯಗಳು ಬರುವುದರಿಂದ ಮುಮು ಕ್ಷುಗಳು ಯಾವ ಮಾರ್ಗವನ್ನು ಅನುಸರಿಸಬೇಕು. ಈ ಶ್ರುತಿಯನ್ನು ಅನುಸರಿಸಿ ದರೆ ಆ ಶ್ರುತಿಗೆ ಅಪ್ರಮಾಣವೂ, ಆ ಶ್ರುತಿಯನ್ನು ಅನುಸರಿಸಿದರೆ ಈ ಶ್ರುತಿಗೆ ಅಪ್ರಮಾಣವು ಸಿದ್ಧವಾಗುವದು. ಶ್ರುತಿಗಳಿಗೆ ಸಂಕೋಚಮಾಡಲು, ಲಕ್ಷಣಾ ದಿಗಳನ್ನನುಸರಿಸಲು ಯುಕ್ತಿಯಿಲ್ಲವಾದಪ್ರಯುಕ್ತ ಎರಡು ಶ್ರುತಿವಾಕ್ಯಗಳಿಗೂ ಪ್ರಾಮಾಣ್ಯವನ್ನು ಅಂಗೀಕರಿಸುವುದು ಸೂಕ್ತವಾದುದರಿಂದ ಜ್ಞಾನಕರ್ಮಗಳಿಗೆ ಸಮಸಮುಚ್ಚಯವನ್ನು ಅಂಗೀಕರಿಸಿ ಶ್ರುತಿಗಳನ್ನು ಸಾರ್ಥಕಮಾಡುವುದು ನಿರ್ದಿಷ್ಟವಾಗಿರುವದು. ಇದೇ ಉಪನಿಷತ್ತಿನಲ್ಲಿ ಮುಂದೆ ಬರುವ ‚‚ವಿದ್ಯಾಂಚಾ ವಿದ್ಯಾಂಚ'' ಎಂಬ ವಾಕ್ಯವು ಜ್ಞಾನಕರ್ಮಸಮುಚ್ಚಯರೂಪವಾದ ಅರ್ಥವನ್ನು ಪ್ರತಿಪಾದಿಸುವದು. ಆ ಮಂತ್ರದಲ್ಲಿ ಈ ಜ್ಞಾನ ಕರ್ಮ ಸಮುಚ್ಚಯವಾದವು ಸ್ಪಷ್ಟವಾಗುವುದೆಂದು ಶಾಂಕರೀಕಾರನ ಆಶಯವು. ||೫||

ಅರ್ಥ—ಯಸ್ತು-ಯಾವ ಭಕ್ತನು, ಸರ್ವಾಣಿ-ಸಮಸ್ತಗಳಾದ, ಭೂತಾನಿ-ಶಿವನು ಮೊದಲುಮಾಡಿ, ಪೃಥಿವ್ಯಂತ-೩೬ ತತ್ವಗಳನ್ನು, ಆತ್ಮನ್ಯೇವ-ಪರಮಾತ್ಮ ನಲ್ಲಿಯೇ, ಅನು-ಗುರೂಪದೇಶಾನಂತರ, ಪಶ್ಯತಿ-ನೋಡುವನೊ, ಸರ್ವಭೂತೇ ಷು-ಆ ಸಕಲ ತತ್ವಗಳಲ್ಲಿಯೂ, ಆತ್ಮಾನಂ-ಪರಶಿವನನ್ನು, ಅನುಪಶ್ಯತಿ-ಗುರೂಪ



ಮೂ || ಯಸ್ತು ಸರ್ವಾಣಿ ಭೂತಾನಿ ಆತ್ಮನ್ಯೇವಾನುಪಶ್ಯ ತಿ । ಸರ್ವಭೂತೇಷುಚಾತ್ಮಾನಂ ತತೋನವಿಜಿಗು ಪ್ಸತೆ ||೬||

ಶಾಂ|| ‚‚ಲಿಂಗಮಧ್ಯೆಜಗತ್ಸರ್ವಂ ತ್ರೈಲೋಕ್ಯಂ ಸಚರಾಚರಂ । ಲಿಂಗ ಬಾಹ್ಯಾತ್ಪರಂನಾಸ್ತಿ ತಸ್ಮಾಲ್ಲಿಂಗಂ ಪ್ರಪೂಜಯೇದಿತ್ಯುಕ್ತಪ್ರಕಾರೇಣ ಲಿಂ ಗೋಪಾಸನಾಪ್ರಕಾರಮಾಹ ಯಸ್ತ್ವಿತ್ಯಾದಿನಾ—ಯಸ್ತು ಸರ್ವಾತ್ಮಕಶಿವೋ

---

ದೇಶಾನಂತರ ನೋಡುತ್ತಾನೆಯೊ, ತತಃ-ಆಮೇಲೆ, ನವಿಜಿಗುಪ್ಸತೆ-ಜುಗುಪ್ಸೆಯಿ ಲ್ಲದೆ ಸುಖದಿಂದ ಮುಕ್ತಿಯನ್ನು ಹೊಂದುವನು.

ತಾ|| ಲಿಂಗಮಧ್ಯೆ ಜಗತ್ಸರ್ವಂ ತ್ರೈಲೋಕ್ಯಂ ಸಚರಾಚರಂ ‚‚ಸರ್ವೋ ವೈರುದ್ರಃ'' ಮೊದಲಾದ ವಾಕ್ಯಗಳಿಂದ ಸ್ಥಾವರಜಂಗಮರೂಪವಾದ ಪ್ರಪಂಚ ವೆಲ್ಲವೂ ಸೃಷ್ಟಿ ಸ್ಥಿತಿ ಸಂಹಾರಕಾರಣವಾದ ಲಿಂಗದಾಧಾರದಲ್ಲಿರುವುದೆ ಹೊರತು ಬೇರೆ ಇಲ್ಲವು. ಎಂಬ ದೃಢತರ ಭಾವನೆಯನ್ನು ಹೊಂದಿ ಮಿಶ್ರತತ್ವಗಳು ೨೫, ಅಶುದ್ಧತತ್ವಗಳು ೬, ಶುದ್ಧತತ್ವಗಳು ೫, ಅಂತು ಅಂಗತತ್ವಗಳು ೨೫, ಲಿಂಗತತ್ವ ಗಳು ೧೧ ಸೇರಿ ೩೬ ತತ್ವಗಳುಳ್ಳ ಈ ವೀರಶೈವಮತರೀತಿಯಾಗಿ (ಗರ್ಭಾಷ್ಟ ಮೆಕೃತಾದೀಕ್ಷಾ) ಎಂಬುಕ್ತಿಯಂತೆ ಹುಟ್ಟಿದ ಎಂಟನೆ ವರ್ಷ ಅಪ್ರಾಕೃತಧರ್ಮ ಗಳನ್ನುಂಟುಮಾಡುವ ಶಿವದೀಕ್ಷೆಯನ್ನು ಸದ್ಗುರುವಿನಿಂದ ಪಡೆದು ಪ್ರಕೃತಿಸಂ ಬಂಧಗಳಾದ ಆವರಣವನ್ನೆಲ್ಲಾ ನಷ್ಟಮಾಡಿ ಅಂಗ ಸಂಸ್ಕಾರ, ಲಿಂಗ ಸಂಸ್ಕಾ ರಗಳನ್ನು ಪಡೆದು, ಮಂತ್ರಾಧ್ವ ವರ್ಣಾಧ್ವ ಮೊದಲಾದ ಷಡಧ್ವಶುದ್ಧಿಪೂರ್ವಕ ಲಿಂಗತ್ರಯಧಾರಣೆಯನ್ನು ಪಡೆದು ಮಂತ್ರಶರೀರಿಯಾದೆನೆಂಬ ದೃಢತರವಾದ ಭಾವನೆಯಿಂದೊಡಗೂಡಿ, ಉರಿಯುತ್ತಿರುವ ಬತ್ತಿಯು ಕೇವಲ ಜ್ಯೋತೀರೂಪ ವಾಗಿಯೇ ತೋರುವಂತೆ, ನಾನೇ ಶಿವಸ್ವರೂಪನಾಗಿರುವೆನೆಂದು ಅನನ್ಯ ಭಾವದಿಂ ಶಿವಲಿಂಗವನ್ನು ಧ್ಯಾನಿಸುತ್ತಿರುವ ಯಾವ ಭಕ್ತನುಂಟೊ; ಆ ಭಕ್ತ ನಿಗೆ ನಿವೃತ್ತಿಮಾರ್ಗದಲ್ಲಿ ಪೃಥಿವ್ಯಾದಿ ಶಿವನವರಿವಿಗೂ ಇರುವ ಭಿನ್ನಭಿನ್ನವಾದ ಪದಾರ್ಥಗಳೆಲ್ಲವು ಶಿವಾತ್ಮಕವಾಗಿಯೇ ಕಾಣುವದು. ಶಿವನೂ ಸಕಲ ಪ್ರಪಂ ಚಾತ್ಮಕನಾಗಿಯೇ ತೋರುವನು. ಈ ಭಕ್ತನಿಗೆ ಶಿವನಿಗಿಂತಲೂ ಬೇರೆಯಾಗಿ ರುವ ಪದಾರ್ಥವಾವುದೂ ಕಾಣುವದಿಲ್ಲವು.

ಹಂ ಭಾವಾಪನ್ನೋಽಭಕ್ತಃ ತು ಶಬ್ದಃ ಲಿಂಗ ಬಾಹ್ಯ ಪರದೃಷ್ಟಿನಿವಾರಣಾರ್ಥಃ ಸರ್ವಾಣಿ ಭೂತಾನಿ ಶಿವಾದಿಭೂಮ್ಯಂತಾನಿ, ಆತ್ಮನ್ಯೇವ ಪರಮಾತ್ಮನಿ ಲಿಂಗ ಏವ, ಅನು ಶಿಕ್ಷಾಗುರೂಪದೇಶಾನಂತರಂ, ಪಶ್ಯತಿ ಅವಲೋಕಯತಿ. ನತು ಪರಶಿವಲಿಂಗಾತಿರಿಕ್ತಂ ಯತ್ಕಿಂಚಿದಪಿಮನ್ಯತ ಇತ್ಯರ್ಥಃ. ಉಕ್ತಂಚ ಸಿದ್ಧಾಂತ ಶಿಖಾಮಣೌ. ,,ಶಿವಲಿಂಗಸ್ಯ ಷಟ್ತ್ರಿಂಶತ್ತತ್ವಾಧಾರತ್ವಂ. ,,ಯಸ್ಯೋರ್ಮಿಬುದ್ಬುಧಾಭಾಸಷ್ಟತ್ರಿಂಶತ್ತತ್ವಸಂಚಯಃ | ನಿರ್ಮಲಂ ಶಿವನಾಮಾನಂ ತಂವಂದೇಚಿನ್ಮಹೋದಧಿಮಿತಿ. ಸರ್ವಭೂತೇಷು ಉಕ್ತೇಷು ತೇಷು ಆತ್ಮಾನಂ ಪರಮಾತ್ಮಾ

---

ಸಮುದ್ರದಲ್ಲಿ ಹುಟ್ಟಿದ ತರಂಗಗಳು ಸಮುದ್ರಕ್ಕಿಂತಲೂ ಹೇಗೆ ಬೇರೆಯಲ್ಲವೋ ಅದರಂತೆ, ಪರಮಾತ್ಮನಲೀಲಾವಿಭೂತಿಯಿಂದ ಹುಟ್ಟಿದ ಚರಾಚರಾತ್ಮಕವಾದ ಜಗತ್ತು ಪರಮಾತ್ಮಕ್ಕಿಂತಲೂ ಅನ್ಯವಲ್ಲವು. ಜೇಡರಹುಳವು ತನ್ನಲ್ಲಿರುವ ಇಚ್ಛಾವಿಶೇಷದಿಂದ ಚಮತ್ಕಾರವಾದ ನೂಲಿನ ಮನೆಯನ್ನು ಕಟ್ಟಿ ಸಂಕೋಚಾವಸ್ಥೆಯಲ್ಲಿ ಆ ನೂಲನ್ನೆಲ್ಲಾ ತನ್ನೊಳಗೆ ಶೇರಿಸಿಕೊಳ್ಳುವದು. ಆಮೆಯು ತನ್ನ ವಿಕಾಸಾವಸ್ಥೆಯಲ್ಲಿ ಕೈಕಾಲುಗಳನ್ನು ಪ್ರಸರಿಸುವುದು. ಸಂಕೋಚಾವಸ್ಥೆಯಲ್ಲಿ ಆ ಕೈಕಾಲುಗಳನ್ನೆಲ್ಲಾ ಹಿಂದಕ್ಕೆ ಎಳೆದುಕೊಂಡು ಏಕರೂಪವಾಗಿಯೇ ತೋರುವದು. ಅದರಂತೆ ಪರಮಾತ್ಮನಲ್ಲಿ ಅವಿನಾಭಾವವಾದ ಶಕ್ತಿಯ ಸಾನ್ನಿಧ್ಯದಿಂದ ಜಗತ್ತು ತೋರುವದು. ಭಾವಿಯನ್ನು ತೋಡಿದೊಡನೆ ನೀರು ಹುಟ್ಟಿತೆಂದು ವ್ಯವಹಾರವಿರುವಂತೆ ಪರಮಾತ್ಮನಲ್ಲಿ ಸೂಕ್ಷ್ಮರೂಪದಿಂದಿದ್ದ ಜಗತ್ತು ವ್ಯಕ್ತವಾಗುವುದೇ ಹೊರತು ಹೊಸದಾಗಿ ಹುಟ್ಟಲಿಲ್ಲ. ಇದಕ್ಕೆ ಸೃಷ್ಟಿಯೆಂದು ವ್ಯವಹರಿಸುವರು. ಸಂಕೋಚಾವಸ್ಥೆಯಲ್ಲಿ ಸರ್ವಜಗತ್ತೂ ಪರಮಾತ್ಮನಲ್ಲಿ ಉಪಸಂಹೃತವಾಗುವದು. ಇದಕ್ಕೆ ಪ್ರಳಯವೆಂತಲೂ ಹೇಳುವರು. ಹೊಸದಾಗಿ ಪರಮಾತ್ಮನಿಂದ ಇಲ್ಲದೆ ಇರುವ ಪದಾರ್ಥಗಳು ಹುಟ್ಟುವುದಿಲ್ಲ ನಾಶವೂ ಆಗುವುದಿಲ್ಲ. ತೋರುವುದಕ್ಕೂ ತೋರದೆ ಇರುವುದಕ್ಕೂ ಸೃಷ್ಟಿ ಪ್ರಳಯಗಳೆಂದು ಹೇಳಬೇಕು. ಹಾಗೆ ಅಂಗೀಕಾರ ಮಾಡದಿದ್ದಲ್ಲಿ (ಚಿದಾತ್ಮೈವಹಿದೇವೋಂತಃಸ್ಥಿತಮಿಚ್ಛಾವಶಾದ್ಬಹಿಃ ಯೋಗೀವನಿರುಪಾದಾನಮರ್ಥಜಾತಂ ಪ್ರಕಾಶಯೇತ್) ಯಥೊದಪಾನಕರಣಾತ್ಕ್ರಿಯತೆ ನಜಲಾಂಬರಂ,, ಸದೇವನೀಯತೆವ್ಯಕ್ತಿಃ, ಅಸತಃ ಸಂಭವಃ ಕುತಃ,, ಯಥೋರ್ಣನಾಭಿಸ್ಸೃಜತೆಗೃಹ್ನತೇಚ,, ಇತ್ಯಾದಿ ಉಪನಿಷತ್ಪ್ರಮಾಣಗಳಿಗೆ ವೈಯ್ಯರ್ಥ್ಯವಂ ಹೇಳಬೇಕಾಗುವದು. ಇಲ್ಲಿ ನಿರವಯವ



ನಂ ಶಿವಂ ಚಕಾರಃ ಕ್ರಿಯಾನುವೃತ್ಯರ್ಥಃ. ಅನುಪಶ್ಯತಿ. ಅನು—ತನುತ್ರಯಗತಾನಾದಿ ಮಲತ್ರಯಮುಸೌಗುರುಃ | ದೀಕ್ಷಾತ್ರಯೇಣನಿರ್ದಗ್ಧ್ವಾ ಲಿಂಗತ್ರಯಮುಪಾದಿಶತ್. ಇತ್ಯುಕ್ತ ಗುರೂಪದೇಶಾನಂತರಂಪಶ್ಯತಿ ಪ್ರೇಕ್ಷತೆ. ಯಃ ಅಧಿಕಾರೀ ಲಿಂಗಾತಿರಿಕ್ತಂ ನವಿಶ್ವಂ ಜಗದತಿರಿಕ್ತಂಚ ನ ಲಿಂಗಂ ಇತಿ ಜ್ಞಾತ್ವಾ ಸರ್ವಾತ್ಮಕಶ್ಶಿವೋಹಮಿತ್ಯಭೇದೋಪಾಸನಾದಾರ್ಢ್ಯ ಸ್ವಾತ್ಮಾನಂ ಶಿವಂಸಾಕ್ಷಾತ್ಕರೋತಿ. ಸಮುಕ್ತೋಭವತೀತ್ಯಾಹ. ತತಇತ್ಯಾದಿನಾ—ತತಃ ಅಭೇದೋಪಾಸನದಾರ್ಢ್ಯಾನಂತರಂ ನವಿಜಗುಪ್ಸತೆ ಜುಗುಪ್ಸಾಂ ನಾಪ್ನೋತಿ. ಮುಕ್ತೋಭವತೀತ್ಯರ್ಥಃ. ಸರ್ವಭೂತಸ್ಥಮಾತ್ಮಾನಂ ಸರ್ವಭೂತಾನಿಚಾತ್ಮನಿ |

---

ವಾದ ಬ್ರಹ್ಮದಿಂದ ಸಾವಯವವಾದ ಪ್ರಪಂಚವು ತೋರುವುದುಹೇಗೆ ಎಂಬ ಆಶಂಕೆ ಹುಟ್ಟುವದು.

ಅನಂತಶಕ್ತಿವಿಶಿಷ್ಟವಾದ ಬ್ರಹ್ಮವು ನಿರವಯವವಾಗಿದ್ದರೂ ಬ್ರಹ್ಮಕ್ಕೆ ಅಘಟಿತಘಟನಾಶಕ್ತಿ ಇರುವುದೆಂದು ಪರಸಹಸ್ರ ಶ್ರುತಿಗಳಿಂದಲೇ ಗೊತ್ತಾಗುವದು' ಈ ವಿಧವಾದ ಬ್ರಹ್ಮವು ಯಾವ ವಿಧವಾದಕಾರಣ ಸಾಮಗ್ರಿಯ ಅಪೇಕ್ಷೆ ಇಲ್ಲದೆ ಇಚ್ಛಾಮಾತ್ರ ಸೃಷ್ಟಿಸಾಮರ್ಥ್ಯವುಳ್ಳುದೆಂದು ಸ್ಪಷ್ಟವಾಗುವದು. ಮತ್ತು ಲೋಕದಲ್ಲಿ ಘಾಳಿಯು ನಿರವಯವವಾಗಿದ್ದರೂ ಆ ಘಾಳಿಯು ಗಿಡಗಳನ್ನು ಅಲ್ಲಾಡಿಸುವದು. ಜೀವನು ನಿರವಯವನಾಗಿದ್ದರೂ ಸ್ವಪ್ನದಲ್ಲಿ ಸಾವಯವವಾದ ಪ್ರಪಂಚವನ್ನು ನೋಡುವನು. ಇಂಥಾ ಲೋಕನಿಷ್ಠವಾದ ನಿರವಯವ ಪದಾರ್ಥದಿಂದ ಸಾವಯವ ಪದಾರ್ಥವು ಸಿದ್ಧವಾಗುವಾಗ ನಿರವಯವನಾದ ಪರಮಾತ್ಮನಲ್ಲಿ ಸಾವಯವ ಪ್ರಪಂಚೋತ್ಪತ್ತಿಯು ನಿರಾಬಾಧವಾಗಿರುವದು. ಇದರಿಂದ ಜೀವ ಜಗತ್ತುಗಳು ಪರಮಾತ್ಮನಲ್ಲಿ ವಿಶೇಷಣರೂಪದಿಂ ಅಪೃಥಕ್ ಸಿದ್ಧಗಳಾಗಿರುವದರಿಂದ ಜಗದ್ರೂಪವಾದ ಕಾರ್ಯಬ್ರಹ್ಮವ, ಕಾರಣರೂಪವಾದ ಸಚ್ಚಿದಾನಂದರೂಪಬ್ರಹ್ಮವು ಅಭಿನ್ನಗಳಾಗಿಯೇ ಇರುವುದೆಂದು ಶ್ರುತಿಸ್ಮೃತೀತಿಹಾಸಗಳಿಂದ ಸ್ಪಷ್ಟವಾಗುವದರಿಂದ, ಲಿಂಗಾಂಗಿಯಾದ ಶಿವಭಕ್ತನು ಪರಮಾತ್ಮನೇ ಸಕಲ ತತ್ವಮಯನಾಗಿರುವನು. ಸಕಲ ತತ್ವಗಳೂ ಪರಮಾತ್ಮನ ಸ್ವರೂಪವಾಗಿರುವವು. ಇದಕ್ಕಿಂತಲೂ ಬೇರೆ ಪ್ರಪಂಚವಿಲ್ಲವು. ಈ ಷಟ್ತ್ರಿಂಶತ್ತತ್ವಾತ್ಮಕವಾದ ನನಗೂ ಪರಮಾತ್ಮನಿಗೂ ಆವಭೇದವು ಇಲ್ಲವು. ,,ಶಿವೋಹಂ,, ಎಂಬ ತೈಲಧಾರಾವದವಿಚ್ಛಿನ್ನವಾದ ಪರಮಾತ್ಮಧ್ಯಾನರೂಪವಾದ ಉಪಾಸನೆ

ಸಂಪಶ್ಯನ್ ಬ್ರಹ್ಮಪರಮಂಯಾತಿ ನಾನ್ಯೇನಹೇತುನಾ || ಏತಚ್ಚೈವಲ್ಯ ಸಮಾ
ನಾರ್ಥಕತ್ವಾತ್ | ಯೋಮಾಂಪಶ್ಯತಿ ಸರ್ವತ್ರಸರ್ವಂಚಮಯಿಪಶ್ಯತಿ.
ತಸ್ಯಾಹಂ ನಪ್ರಣಶ್ಯಾಮಿ ಸಚಮೇನಪ್ರಣಶ್ಯತಿ. ಇತಿ ಕೃಷ್ಣಗೀತಾವಚನ
ಪ್ರಾಮಾಣ್ಯಾಚ್ಚ. ||೬||

**ಮೂ || ಯಸ್ಮಿಂತ್ಸರ್ವಾಣಿ ಭೂತಾನ್ಯಾತ್ಮೈವಾಭೂದ್ವಿ
ಜಾನತಃ | ತತ್ರಕೋಮೋಹಃಕಶ್ಶೋಕ ಏಕತ್ವಮ
ನುಪಶ್ಯತಃ ||೭||**

ಶಾಂ|| ಉಕ್ತಮೇವಅರ್ಥಮಾಹ ಯಸ್ಮಿನ್ ಇತಿ—ಯಸ್ಮಿನ್ ಪರಶಿವ
ಲಿಂಗೆ, ಅವಸ್ಥಾವಿಶೇಷೇವಾ, ವಿಜಾನತಃ ಶಿವಾದಿಧರಣ್ಯಂತಾನಿತತ್ವಾನಿ ಪರ
ಮಾತ್ಮನಿ. ಲಿಂಗೆ. ಸಂತಿ. ಪರಮಾತ್ಮಾಚ ಶಿವಾದಿಧರಣ್ಯಂತೇಷ್ವಸ್ತಿ. ಇತಿ ವಿಶೇ
ಷೇಣಜ್ಞಾನವತಃ, ಸರ್ವಾಣಿ ಭೂತಾನಿ ಪತ್ರಶಾಖಾದಯಃ ಪಾದಪ ಇವ
ಆತ್ಮೈವಾಭೂದ್ಭವಂತಿ. ಶಿವಾದಿಧರಣ್ಯಂತಾನಿತತ್ವಾನಿ ನ ಶಿವಲಿಂಗವಿಭಕ್ತಾನಿ,
ಶಿವಲಿಂಗಂಚ ನ ತದತಿರಿಕ್ತಂ ಇತಿಜ್ಞಾತ್ವಾ ಯ ಉಪಾಸ್ತೆ ತಸ್ಯತತ್ರಶಿವಲಿಂಗೆ

---

ಯುಳ್ಳ ಶಿವಭಕ್ತನಿಗೇನೆ ನಸಪುನರಾವರ್ತತೆ,, ಎಂಬ ಶ್ರುತ್ಯನುಸಾರವಾಗಿ ಪುನ
ರಾವೃತ್ತಿರಹಿತವಾದ ನಿತ್ಯ ಸುಖಪ್ರದವಾದ ಮುಕ್ತಿಯು ಕೈಶೇರುವದು. ಎಂಬು
ವುದೇ ಈ ಗ್ರಂಥಕರ್ತರ ಆಶಯವು ||೬||

ಅರ್ಥ—ಯಸ್ಮಿನ್-ಯಾವಕಾಲದಲ್ಲಿ, ವಿಜ್ಞಾನತಃ-ವಿಶೇಷವಾದ ಅರಿವುಳ್ಳ
ವನಿಗೆ, ಸರ್ವಾಣಿ-ನಿಖಿಲವಾದ, ಭೂತಾನಿ-೩೬ ತತ್ವಗಳು, ಆತ್ಮೈವ-ಶಿವಸ್ವರೂ
ಪವಾಗಿಯೇ, ಅಭೂತ್-ಆದುವೋ! ತತ್ರ-ಅಕಾಲದಲ್ಲಿ, ಏಕತ್ವಂ-ಶಿವನೊಡನೆ,
ಅಭೇದವನ್ನು, ಅನುಪಶ್ಯತಃ-ನೋಡುವವನಿಗೆ, ಮೋಹಃ-ಅಜ್ಞಾನವು, ಕಃ-ಎಲ್ಲಿ?
ಶೋಕಃ-ದುಃಖವು, ಕಃ-ಎಲ್ಲಿ?

ತಾ|| ನಿಖಿಲ ಚರಾಚರಾತ್ಮಕವಾದೀಪ್ರಪಂಚವು ಶಿವಲಿಂಗಮಯವಾಗಿ
ಯೂ, ಶಿವಲಿಂಗವು ಪ್ರಪಂಚಮಯವಾಗಿಯೂ, ಕಾಣುತ್ತಿರುವ ಲಿಂಗಾಂಗ
ಸಾಮರಸ್ಯವುಳ್ಳ ಜ್ಞಾನೀಪುರುಷನನ್ನು ಶೋಕಮೋಹರೂಪವಾದ ದ್ವಂದ್ವವು
ಆಕ್ರಮಿಸುವುದಿಲ್ಲವು. ಶೋಕಮೋಹಗಳು ಚಿತ್ತದಿಂದುಂಟಾಗುವುವು. ಆತ್ಮನ
ಸಂಕೋಚವಾದ ಶಕ್ತಿಯೇ ಚಿತ್ತವೆನಿಸುವದು. ಈ ಚಿತ್ತವು ಇರುವವರಿವಿಗೂ



ಅವಸ್ಥಾವಿಶೇಷೇವಾ ಏಕತ್ವಂ ಸ್ವಾಭೇದಂ ಅನುಪಶ್ಯತಃ ಕೋಮೋಹಃ ಕ
ಶ್ಶೋಕಃ? ಶೋಕಮೋಹಯೋಃ ಸಂಕುಚಿತಸ್ವಶಕ್ತಿ ಮಲಕಾರ್ಯತ್ವಾತ್. ತನ್ಮಲ
ಸ್ಯಚ ಲಿಂಗತ್ರಯೋಪದೇಶಾನಂತರಂ ಗುರೂಪದಿಷ್ಟೋಪಾಯಾನುಷ್ಠಾನವತಃ
ಶಿಷ್ಯಸ್ಯ ಅಸಂಬದ್ಧತ್ವಾತ್. ತೇನಚ ತಲ್ಲಿಂಗೆ ಸಾಕ್ಷಾತ್ಕೃತೆ ಶೋಕಮೋಹಾ
ದೀನಾಂ ದೂರಾಪಾಸ್ತತ್ವಾದಿತ್ಯರ್ಥಃ. ಉಕ್ತಂಚ ಸಿದ್ಧಾಂತ ಶಿಖಾಮಣೌ.
"ಪತ್ರಶಾಖಾದಿರೂಪೇಣ ಯಥಾತಿಷ್ಠತಿಪಾದಪಃ | ತಥಾಭೂಮ್ಯಾದಿರೂಪೇಣ
ಶಿವಏಕೋವಿರಾಜತೆ || ಉಕ್ತಂಚ ಸ್ವಸ್ವರೂಪ ಶಿವಲಿಂಗ ಸಾಕ್ಷಾತ್ಕಾರೆ ಶೋ
ಕಮೋಹಾದೀನಾಮಸತ್ವಂ "ಭಿದ್ಯತೆ ಹೃದಯಗ್ರಂಥಿಶ್ಛಿದ್ಯಂತೆ ಸರ್ವಸಂಶ
ಯಾಃ | ಕ್ಷೀಯಂತೆಚಾಸ್ಯಕರ್ಮಾಣಿ ತಸ್ಮಿನ್ ದೃಷ್ಟೆ ಪರಾವರ ಇತಿ" ಉಕ್ತಂಚಾ
ನುಭವಸೂತ್ರೆ" ಏವಮದ್ವೈತಭಕ್ತ್ಯೈವ ಪ್ರಸಾದಸ್ಸರ್ವತೋಮುಖಃ | ಪ್ರಸಿಧ್ಯತಿ
ತತಸ್ಸರ್ವಮಾತ್ಮರೂಪೇಣದೃಶ್ಯತೆ" ಇತ್ಯಾದಿನಾ "ಸರ್ವಮಾತ್ಮತಯಾಭಾತಿ
ಪ್ರಸಾದಾತ್ಪಾರಮೇಶ್ವರಾದಿತ್ಯಂತೇನ" ||೭||

---

ಚಿತ್ತವು ನಾಶವಾಗುವದಿಲ್ಲವು. 'ತನುತ್ರಯಗತಾನಾದಿ ಮಲತ್ರಯಮಸೌಗುರುಃ'
ಎಂಬಾಗಮವಚನಾನುಸಾರವಾಗಿ ಶಿವದೀಕ್ಷಾಪೂರ್ವಕ ಪಂಚಸೂತ್ರಘಟಿತ
ಶಿವಲಿಂಗಧಾರಣಾನಂತರ ಗುರೂಪದೇಶದಿಂದ ಮಲಗಳೆಲ್ಲವೂ ನಾಶಹೊಂದಿ
ಗುರುಗಳಿಂದ ಹೇಳಲ್ಪಟ್ಟ ರೀತಿಯಾಗಿ ತ್ರಿವಿಧಲಿಂಗೋಪಾಸನೆಯಂ ಮಾ
ಡುತ್ತ, ಪರಮಾತ್ಮ ಸಾಕ್ಷಾತ್ಕಾರವಂ ಪಡೆದು ಹೃದಯದಲ್ಲಿ ಕಟ್ಟಿರುವ ಅಜ್ಞಾ
ನರೂಪವಾದ ಗಂಟನ್ನು ಕಿತ್ತುಹಾಕಿ, ಸರ್ವಸಂಶಯಗಳೆಲ್ಲವು ದಿಕ್ಕೆಟ್ಟು ಓಡು
ತ್ತಿರಲು, ಹಿಂದೆ ಆರ್ಜಿಸಿದ ಸಂಚಯ ಮೊದಲಾದ ಕರ್ಮರಾಶಿಯು ಶಿವಜ್ಞಾನ
ರೂಪವಾದ ಅಗ್ನಿಯಿಂದ ದಹಿಸಲ್ಪಟ್ಟು, ನಿರ್ಮಲಾತ್ಮನೆಂದೆನಿಸಿ, ಸೂರ್ಯಪ್ರಕಾಶ
ದಿಂದ ಕತ್ತಲೆಯು ಓಡುವಂತೆ ಚಿತ್ತಕಾರ್ಯವೆನಿಸಿದ ಶೋಕ ಮೋಹಾದಿಗಳು
ನಾಶವನ್ನು ಹೊಂದಿ, ಪ್ರಪಂಚವೆಲ್ಲವೂ ಶಿವಾತ್ಮಕವಾಗಿಯೇ ಕಾಣುತ್ತ, ತಾನೂ
ಪ್ರಪಂಚವೂ ಏಕರೂಪದಿಂ ಕಾಣಿಸಿಕೊಳ್ಳುವ ಅದ್ವೈತಭಕ್ತಿಯುಳ್ಳ ಮಹಾ
ಪುರುಷನೇ ಮುಕ್ತಾತ್ಮನೆನಿಸುವನು. ಈತನೇ ದ್ವಂದ್ವರಹಿತನು. ಮುಕ್ತಾತ್ಮನು.
ಜಗದ್ವಂದ್ಯನು. ಕೃತಕೃತ್ಯನು. ಶಿವಾನುಗ್ರಹಕ್ಕೆ ಪಾತ್ರನು. ಈ ವಿಷಯದಲ್ಲಿ
ಉಪನಿಷತ್ತು ಸಿದ್ಧಾಂತಶಿಖಾಮಣಿ ಅನುಭವಸೂತ್ರ ಮೊದಲಾದವುಗಳೇ
ಪ್ರಮಾಣಗಳು ಎಂದು ಇವರ ಅಭಿಪ್ರಾಯವು. ||೭||

ಮೂ॥ ಸಪರ್ಯಗಾಚ್ಛುಕ್ರಮಕಾಯ ಮವ್ರಣಮಸ್ನಾ
ವಿರಂಶುದ್ಧ ಮಪಾಪವಿದ್ಧಂ । ಕವಿರ್ಮನೀಷೀಪರಿ
ಭೂಃ ಸ್ವಯಂಭೂಃ ಯಾಥಾತಥ್ಯತೋರ್ಥಾನ್
ವ್ಯದಧಾಚ್ಛಾಶ್ವತೀಭ್ಯಸ್ಸಮಾಭ್ಯಃ ॥೮॥

ಶಾಂ ॥ ಪರಶಿವಸ್ವರೂಪಸಂಜ್ಞಾತ್ವಾ ತದುಪಾಸನಂಕುರ್ವತಃ ಶೋಕ ಮೋಹಾದ್ಯಭಾವ ಏವೇತಿ ನ. ಕಿಂತು, ಸಿಂಧುಸೈಂಧವಯೋಃ ನದೀಸಮುದ್ರಯೋಃ ನೀರನೀರಯೋಃ ಕ್ಷೀರಕ್ಷೀರಯೋರೈಕ್ಯಮಿವ ಪರಶಿವ ಮಹಾಲಿಂಗ ಸಾಮರಸ್ಯಮೇವ ಭವತೀತ್ಯಾಹ ಸಪರ್ಯಗಾದಿತಿ—ಯಃ, ಅಧಿಕಾರೀಭಕ್ತಃ

---

ಅರ್ಥ—ಸಃ-ಹಿಂದಿನ ಮಂತ್ರದಲ್ಲಿ ಹೇಳಲ್ಪಟ್ಟ ಪ್ರಕಾರ ಶಿವನೊಡನೆ ಅದ್ವೈತೋಪಾಸನೆಯಂ ಮಾಡುವ ಭಕ್ತನು, ಶುಕ್ರಂ—ಪ್ರಕಾಶರೂಪನಾದ, ಅಕಾಯಂ—ಹೇಯಶರೀರಶೂನ್ಯವಾದ, ಅವ್ರಣಂ—ಘಾಯ ಹೊಂದದೆ ಇರುವ, ಅಸ್ನಾವಿರಂ—ನರಗಳ ಸಂಬಂಧವಾದ ಶರೀರವಿಲ್ಲದಿರುವ, ಶುದ್ಧಂ—ಅಜ್ಞಾನದೋಷವಿಲ್ಲದಿರುವ, ಅಪಾಪವಿದ್ಧಂ—ಪಾಪಕರ್ಮದಿಂ ವ್ಯಾಪಿಸಲ್ಪಡದಿರುವ ಪರಶಿವ ಲಿಂಗವನ್ನು, ಪ್ರತ್ಯಗಾತ್—ಹೊಂದುವನು. ಕವಿಃ—ಸರ್ವಸಾಕ್ಷಿಯಾಗಿಯೂ, ಮನೀಷೀ—ಸರ್ವಜ್ಞನಾಗಿಯೂ, ಪರಿಭೂಃ—ಯಲ್ಲವನ್ನೂ ತನ್ನ ವಶಮಾಡಿಕೊಳ್ಳುವವನಾಗಿಯೂ, ಸ್ವಯಂಭೂಃ—ಇತರ ಅಪೇಕ್ಷೆ ಇಲ್ಲದವನಾಗಿಯೂ, ಯಾಥಾತಥ್ಯತಃ—ಯಥಾರ್ಥಗಳಾದ, ಅರ್ಥಾನ್—ಪದಾರ್ಥಗಳನ್ನು, ಶಾಶ್ವತೀಭ್ಯಃ—ಸ್ಥಿರಗಳಾದ, ಸಮಾಃ—ವರ್ಷಗಳಲ್ಲಿ, ವ್ಯದಧಾತ್—ಮಾಡುವನು.

ತಾ॥ ಶಿವಾದ್ವೈತೋಪಾಸನೆಯಂ ಮಾಡುವವನಿಗೆ ಹಿಂದೆ ಹೇಳಿದ ಮಂತ್ರದಂತೆ ಶೋಕ ಮೋಹಗಳು ನಿವೃತ್ತಿಯಾಗಿ ಆನಂದ ಸುಖವನ್ನು ಅನುಭವಿಸುತ್ತಿರುವ ಭಕ್ತನು ಶಿವಲಿಂಗಪ್ರಸಾದ, ಶಿವಲಿಂಗತೀರ್ಥಗಳಿಂದಲೇ ತನ್ನ ಮಂತ್ರ ಶರೀರವನ್ನು ಕಾಪಾಡಿಕೊಳ್ಳುತ್ತಿರುವನು. ಶಿವನನ್ನು ಸಕಲ ಪ್ರಪಂಚದೊಡನೆ ಏಕೀಭವಿಸಿ ಅಭೇದಾಕಾರದಿಂದ ಉಪಾಸನೆಯಂ ಮಾಡುವನು. ಈರೀತಿಯಾಗಿ ಅಭಿನ್ನೋಪಾಸನೆಯಂ ಮಾಡುತ್ತಿರುವ ಭಕ್ತನು ಪರಮಾತ್ಮನಲ್ಲಿ ಬೆರೆದು ತಾನೂ ಪರಮಾತ್ಮನಂತೆ ಆನಂದಮಯನಾಗಿಯೂ, ಸ್ವಪ್ರಕಾಶಸ್ವರೂಪನಾಗಿಯೂ,



ಪೂರ್ವೋಕ್ತಪ್ರಕಾರೇಣ ಪರಮಾತ್ಮಲಿಂಗಂ ಸರ್ವಾಭಿನ್ನಂ ಮನ್ಯಮಾನೋಧ್ಯಾನಾಭ್ಯಾಸಂಕರೋತಿ? ಸಃ ಶುಕ್ರಾದ್ಯಪಾಪವಿದ್ಧಾಂತ ವಿಶೇಷಣವಿಶಿಷ್ಟಂಪರಶಿವಲಿಂಗಂ, ಪರ್ಯಗಾತ್ ಪ್ರಾಪ್ನೋತಿ. «ವರ್ತಮಾನೇಲುಜ್» ಯಥಾನದ್ಯಸ್ಸ್ಯಂದಮಾನಾಃ ಸಮುದ್ರೇ ಅಸ್ತಂಗಚ್ಛಂತಿ ನಾಮರೂಪೇವಿಹಾಯ ತಥಾವಿದ್ವಾನ್ ನಾಮರೂಪಾದ್ವಿಮುಕ್ತಃ ಪರಾತ್ಪರಂ ಪುರುಷಮುಪೈತಿದಿವ್ಯಂ» ಇತಿ ಶ್ರುತೇಃ. ಉಕ್ತಂಚಾನುಭವಸೂತ್ರೇ «ಯಥಾನಾನಾವಿಧಾನದ್ಯೋ ನಾನಾವಿಧಜಲಾಅಪಿ । ಸ್ಯಂದಮಾನಾಇಮಾಸ್ಸರ್ವಾ ಅಕೂಪಾರಂಸಮಾಶ್ರಿತಾಃ» ತದ್ರೂಪೇಣೈವದೃಶ್ಯಂತೇ ನಾಮರೂಪವಿಹಾಯಚ । ತಥಾದ್ವೈತಂ ಸಮಾಶ್ರಿತ್ಯ ಕ್ರಿಯಾ ನಾನಾವಿಧಾಅಪಿ» ಅದ್ವೈತಭಕ್ತಿರೂಪೇಣ ದೃಶ್ಯಂತೇ ಭಕ್ತಿಯೋಗತ ಇತಿ. ಸ್ಥೂಲಶರೀರಾದಿರಹಿತ ತತ್ಪರಶಿವಲಿಂಗಭಾವಾಪನ್ನ ವಿಗಳಿತಜೀವಭಾವಸ್ಸನ್ ಭಕ್ತಃ ಜಗತ್ಸರ್ಜನಾದಿ ಕರೋತೀತ್ಯಾಹ ಕವಿರಿತಿ.—ಕವಿಃ ಕ್ರಾಂತದರ್ಶೀ

---

ಜನನ ಮರಣ ಪ್ರವಾಹದ ಸಂಬಂಧದಿಂ ಬಿಡುಗಡೆಯಂ ಹೊಂದಿದವನಾಗಿಯೂ ಪುಣ್ಯ ಪಾಪಗಳಿಂದುಂಟಾಗುವ ಕರ್ಮ ಶರೀರರಹಿತನೂ ಆಗುವನು. ಈತನಿಗೆ ಕರ್ಮಜನ್ಯವಾದ ಶರೀರವಿಲ್ಲದುದರಿಂದ ಯಾವ ವಿಧವಾದ ಕ್ಷತಿಯು ಉಂಟಾಗುವದಿಲ್ಲವು. ಅಜ್ಞಾನ ಸಂಬಂಧವಾದ ದೋಷದ ಗಂಧವೂ ಇಲ್ಲದಂತಾಗುವದು. ಊರ್ಮಿಷಟ್ಕರಹಿತನೂ ಆಗುವನು. ಕರ್ಮಗಳು ಪುನಃ ಈ ಭಕ್ತನನ್ನು ಆಕ್ರಮಿಸುವದಿಲ್ಲವು.

ಗಂಗಾ, ಯಮುನಾ, ಗೋದಾವರೀ ಮೊದಲಾದ ಮಹಾ ನದಿಗಳು ಸಮುದ್ರವನ್ನು ಪ್ರವೇಶಮಾಡಿ ತಮ್ಮ ತಮ್ಮ ನಾಮರೂಪಗಳನ್ನು ಬಿಟ್ಟು ಸಮುದ್ರರೂಪವಾಗಿಯೇ ತೋರುವಂತೆಯೂ, ಲವಣವು ಸಮುದ್ರದಲ್ಲಿ ಸಮರಸವಾಗಿ ತನ್ನ ರೂಪವನ್ನು ತ್ಯಜಿಸಿ ಕೇವಲ ಸಮುದ್ರ ಸ್ವರೂಪದಿಂದಲೆ ಕಾಣುವಂತೆಯೂ, ಹಾಲಿನಲ್ಲಿ ಹಾಲನ್ನು ಬೆರೆಸಿದಂತೆಯೂ, ನೀರಿನಲ್ಲಿ ನೀರನ್ನು ಬೆರೆಸಿದಂತೆಯೂ, ಈ ವಿಧವಾದ ಉಪಾಸನೆಯಂ ಮಾಡುತ್ತಿರುವ ಅಂಗಶಬ್ದವಾಚ್ಯರಾದ ಭಕ್ತಜೀವರು ಲಿಂಗಶಬ್ದವಾಚ್ಯನಾದ ಪರಮಾತ್ಮನಲ್ಲಿ ಸಮರಸ ಭಾವವನ್ನು ಹೊಂದುವರು. ಇವರಿಗೆ ಮುಕ್ತಾತ್ಮರೆಂದು ಹೆಸರು. ಇವರು ಪರಮಾತ್ಮನಂತೆ ಸರ್ವನಿಯಾಮಕರು. ಸರ್ವವಿಷಯಕಜ್ಞಾನವುಳ್ಳವರೂ, ಸರ್ವಸಾಕ್ಷಿಯೂ, ಕಾಮಕ್ರೋಧಾದಿಗಳಿಂದ ಆಕ್ರಮಿಸಲ್ಪಡದವರು, ಮುತ್ತೊಂದರ ಅಪೇಕ್ಷೆ ಇಲ್ಲದ

ಸರ್ವದೃಗಿತ್ಯರ್ಥಃ. ‹‹ನಾನ್ಯತೋಽಸ್ತಿದ್ರಷ್ಟಾ›› ಇತಿಶ್ರುತೇಃ. ಪರಿಭೂಃ ಪರಿಭವತಿ ಸರ್ವಂವಶೀಕರೋತಿ. ಸರ್ವನಿಯಾಮಕ ಇತ್ಯರ್ಥಃ. ಸ್ವಯಂಭೂಃ ಸ್ವಯಮೇವಭವತೀತಿಸ್ವಯಂಭೂಃ. ಸ್ವೇತರಾನನಪೇಕ್ಷ್ಯವರ್ತತೆ, ಸ್ವತಂತ್ರತಾಶಕ್ತಿಮಾನಿತ್ಯರ್ಥಃ. ಏತಾವತಾ ಸರ್ವಜ್ಞತ್ವಾದಿಕಮುಪಾಸನಫಲಮುಕ್ತ್ವಾ, ಸರ್ವಕರ್ತೃತ್ವಮಪಿ ತತ್ಫಲಮಾಹ ಯಾಥಾತಥ್ಯತೋಽರ್ಥಾನಿತಿ.—ಯಾಥಾತಥ್ಯತಃ ಯಥಾತಥಾಭಾವಃ ಯಾಥಾತಥ್ಯಂ ತೇನ ಯಥಾಸ್ವರೂಪಾನ್ ಅರ್ಥಾನ್ ಪದಾರ್ಥಾನ್ ನ ಮಿಥ್ಯಾರೂಪಾನ್. ಶಾಶ್ವತೀಭ್ಯಃ ಸಮಾಭ್ಯಃ—ಶಾಶ್ವತೀಷು ಸಮಾಸು ವಿಭಕ್ತಿವ್ಯತ್ಯಯಶ್ಛಾಂದಸಃ. ವ್ಯದಧಾತ್, ಕುರುತೆ. ಉಕ್ತಂಚರಹಸ್ಯ ಸೂತ್ರೆ. ‹‹ಏಷೋಽನ್ಯತ್ರತ್ರುಟೇಃ ಪಾತಃ ಪ್ರೋಕ್ತಸ್ಸರ್ವಜ್ಞತಾದಿಭಾಕ್›› ಉತ್ಪಲಾಚಾರ್ಯೇಣಾಪಿ ಸ್ಪಂದಪ್ರದೀಪಿಕಾಯಾಂ—ತ್ರುಟಿಪಾತೆಸರ್ವಜ್ಞತ್ವ ಸರ್ವಕರ್ತೃತ್ವ ಸರ್ವೇಶತ್ವಾದಯೋಽಭವಂತಿಏಷಚ ಗುರೂಪದೇಶೆನಾದರಾತ್ ಪರೀಕ್ಷ್ಯ ಇತಿ

---

ವರು, ಸ್ವತಂತ್ರಶಕ್ತಿಯುಳ್ಳವರು ಆಗುವರು. ಇವರಿಗೆ ಪರಮಾತ್ಮನ ಅಸಾಧಾರಣವಾದ ಶುದ್ಧತ್ವಾದಿ ಗುಣಗಳೂ ಪ್ರಾಪ್ತಗಳಾಗುವುದಲ್ಲದೆ ಈಶ್ವರನಿಗಿರುವಂತೆ ಸರ್ವಕರ್ತೃತ್ವವೂ ಸಿದ್ಧವಾಗುವದು.

ಇಲ್ಲಿ ಪರಮಾತ್ಮನು ಶರೀರ ರಹಿತನೆಂದು ಹೇಳಿದ ಮೇಲೆ ಶರೀರವಿಲ್ಲದವನಿಗೆ ಜಗತ್ಕರ್ತೃತ್ವವು ಸಂಭವಿಸುವುದಿಲ್ಲ. ಲೋಕದಲ್ಲಿ ಕರ್ತೃತ್ವವೆಂಬುವದು ಶರೀರವಿರುವವನಿಗಲ್ಲದೆ ಇತರರಿಗೆ ಸಂಭವಿಸದು. ಆದುದರಿಂದ ಶರೀರರಹಿತನಾದ ಪರಮಾತ್ಮನಿಗೇನೆ ಕರ್ತೃತ್ವವು ಸಿದ್ಧಿಸದು. ಇಂಥಾ ನಿರಂಗ ನಿಮಿತ್ತವಾದ ಕರ್ತೃತ್ವ ಶೂನ್ಯವಾದ ಪರಶಿವನನ್ನು ಉಪಾಸನೆ ಮಾಡುವ ಭಕ್ತರ್ಗೆ ಕರ್ತೃತ್ವವು ಸುತರಾಂ ಅಪ್ರಸಿದ್ಧವು. ಪರಮಾತ್ಮನಲ್ಲಿ ಕರ್ತೃತ್ವ ಸಿದ್ಧವಾದರೆ ಶರೀರವು ಸಿದ್ಧವಾಗುವದು. ಕರ್ತೃತ್ವವೆಂಬುವದು ಶರೀರಸಾಪೇಕ್ಷೆಯಿಂದಲೆ ಇರುವದು. ಎಂದು ಆಶಂಕೆ ಬಂದಲ್ಲಿ ಪರಮಾತ್ಮನು ವೀರಶೈವಸಿದ್ಧಾಂತಾನುಸಾರವಾಗಿ ಶರೀರ ರಹಿತನೆಂದು ಹೇಳುವದಿಲ್ಲವು. ಹಾಗಾದರೆ ಈ ಮಂತ್ರದಲ್ಲಿರುವ ‹‹ಅಕಾಯಂ ಅಸ್ನಾವಿರಂ››ಮೊದಲಾದ ಶರೀರ ನಿಷೇಧಕವಾಕ್ಯಗಳು ನಿರರ್ಥಕಗಳಾಗುವುವೆಂದರೆ—ಪರಮಾತ್ಮನು ಶರೀಶ ರಹಿತನೆಂದು ಹೇಳುವ ವಾಕ್ಯಗಳೆಲ್ಲವೂ ಕರ್ಮಜನ್ಯವಾದಪ್ರಯುಕ್ತ ನಾಶಪ್ರತಿಯೋಗಿಯಾದ ಹೇಯ ಶರೀರ ರಹಿತನೆಂದು ಹೇಳಬೇಕು. ಹಾಗೆ ಹೇಳದಿದ್ದರೆ ‹‹ನತಸ್ಯಪ್ರಾಕೃತಾಮೂರ್ತಿಃ››



ವ್ಯಾಖ್ಯಾತಂ. ಏವಂಲಿಂಗಾಂಗಸಂಬಂಧ ಭಾವನಾಯಸ್ಯವಿದ್ಯತೆ | ಸಯೋಗೀಸಚ ಸರ್ವಜ್ಞೋ ಜೀವನ್ಮುಕ್ತಸ್ಸಉಚ್ಯತೆ. ಇತ್ಯಾದಿಸಿದ್ಧಾಂತವಾಕ್ಯಾನಾಂ ಪ್ರಾಮಾಣ್ಯಾಚ್ಚ. ‹‹ಅಹಮನ್ನಮಹಮನ್ನಮಹಮನ್ನ ಮಹಮನ್ನಾದೋಽಹಮನ್ನಾದೋಽಹಮನ್ನಾದೋಽಹಮನ್ನಾದ ಇತಿಶ್ರುತೇಃ.

ಅತ್ರ ಶುಕ್ರಮಿತ್ಯಾದೀನಿ ವಚಾಂಸಿ ಪುಲ್ಲಿಂಗತ್ವೇನ ಪರಿಣೇಯಾನೀತಿ ಯತ್ ತತ್ತುಚ್ಛಂ, ಯಥಾಶ್ರುತನಪುಂಸಕಲಿಂಗತ್ವೆನೈವ ತದ್ವಚಸಾಂ ಸಮನ್ವಯಾತ್. ಯಸ್ತುಸರ್ವಾಣಿ ಭೂತಾನೀತಿಮಂತ್ರೆ ಯತ್ಪದನಿರ್ದಿಷ್ಟಾಧಿಕಾರಿಣಮೇವ ಸಪರ್ಯಗಾದಿತ್ಯತ್ರ ತತ್ಪದೇನಗೃಹೀತುಂ ಶಕ್ಯತ್ವಾತ್. ಯತ್ತದರ್ಥಯೋರ್ನಿತ್ಯಸಂಬಂಧಾಚ್ಚ. ನನ್ವಸ್ತು ಸರ್ವಕರ್ತೃತ್ವಸಿದ್ಧೌ ಶಿವಸ್ಯ ತದ್ಭಾವಾಪನ್ನಸ್ಯ ತತ್ವಂ. ಕರ್ತೃತ್ವಸ್ಯ ಶರೀರಸಾಪೇಕ್ಷತ್ವಾತ್. ಕುಲಾಲೇತಸ್ಯದೃಷ್ಟತ್ವಾತ್, ಪ್ರಕೃತೇಚ ಅಕಾಯಮಿತ್ಯಾದಿನಾ ಶರೀರಸ್ಯನಿಷಿದ್ಧತ್ವಾತ್. ಕರ್ತೃತ್ವ

---

ಎಂಬ ಶ್ರುತಿವಾಕ್ಯವು ಪರಮಾತ್ಮನಲ್ಲಿ ಹೇಯವಾದ ಕರ್ಮಶರೀರವನ್ನು ನಿಷೇಧಮಾಡಿ ಪ್ರಾಕೃತದಿವ್ಯಶರೀರಿಯೆಂದು ಹೇಳುವುದರಿಂದಲೂ, ‹‹ಯತ್ತೆರೂಪಕಲ್ಯಾಣತಮಂ ತತ್ತೆಪಶ್ಯಾಮಿ›› ಯಏಷೋಽಂತರಾದಿತ್ಯೋಹಿರಣ್ಮಯಃಪುರುಷೋದೃಶ್ಯತೆ› ಆದಿತ್ಯವರ್ಣಂತಮಸಃ ಪರಸ್ತಾತ್› ಸ್ಥಿರೇಭಿರಂಗೈ› ಯಾತೆರುದ್ರಶಿವಾತನೂಃ›› ಮೊದಲಾದ ಅನಂತ ಶ್ರುತಿವಾಕ್ಯಗಳಿಗೆಲ್ಲಾ ಪ್ರಯೋಜನವೇ ಇಲ್ಲವಾಗುವುದು. ಆದುದರಿಂದ ಪರಮಾತ್ಮನಿಗೆ ಸ್ವೇಚ್ಛಾಕಲ್ಪಿತವಾದ ಅಪ್ರಾಕೃತ ಶರೀರವಿರುವುದಾದ ಕಾರಣವೇ ಪರಮಾತ್ಮನಲ್ಲಿ ಕರ್ತೃತ್ವವು ಸಿದ್ಧಿಯಾಗುವದು. ಪರಮಾತ್ಮನಲ್ಲಿ ಕರ್ತೃತ್ವವು ಸಿದ್ಧವಾಗಲು ಭಕ್ತಿಯೋಗರೂಪವಾದ ಧ್ಯಾನ ನಿಮಿತ್ತ ಪರಮಾತ್ಮೋಪಾಸಕರಾದ ಭಕ್ತರಿಗೂ, ಪರಮಾತ್ಮನಿಷ್ಠಯಾವದ್ಧರ್ಮಗಳುಂಟಾಗಿ ‹‹ಅಹಮನ್ನಾದೊ›› ಎಂಬ ಶ್ರುತ್ಯುಕ್ತಿಯಂತೆ ಶಿವಸ್ವರೂಪನೇ ಆಗುವನೆಂದು ವ್ಯಾಖ್ಯಾಕಾರರ ಅಭಿಪ್ರಾಯವು.

ಇಲ್ಲಿ ಶುಕ್ರಂ›› ಅಕಾಯಂ›› ಮೊದಲಾದ ಸ್ಥಲಗಳು ನಪುಂಸಕ ವಿಶೇಷಣಗಳಾಗಿದ್ದರೂ ಕೆಲವರು ಪುಲ್ಲಿಂಗಗಳನ್ನಾಗಿ ಕಲ್ಪಿಸಿಕೊಳ್ಳುತ್ತಾರೆ. ಇದು ಅಷ್ಟು ಚನ್ನಾಗಿ ಇರುವುದಿಲ್ಲ. ನಪುಂಸಕವಾಗಿದುವಾಗಲೇ ಚನ್ನಾಗಿ ಅನ್ವಯಿಸುತ್ತಿರುವಲ್ಲಿ ಪುಲ್ಲಿಂಗಗಳನ್ನಾಗಿ ಕಲ್ಪಿಸಿಕೊಳ್ಳುವುದು ವ್ಯರ್ಥವು. ಇದ

ಸಿದ್ಧೌ ಪರಮೇಶ್ವರಸ್ಯ ಶರೀರಸಿದ್ಧಿಃ ಸ್ವಯಮೇವ ಬಾಧಾ. "ಘಟಸ್ಯಕರ್ತಾ ಕುಲುಕುಂಭಕಾರಃ ಕರ್ತಾಽಶರೀರೀ ನಹಿಚಾಶರೀರೀ" ಇತ್ಯುಕ್ತತ್ವಾಚ್ಚ. ಕಥಂ ಕರ್ತೃತ್ವಂ ಶಿವಸ್ಯಸಂಭವತ್ಯಶರೀರತ್ವಾತ್. ಅಶರೀರಂವಾ ವಸಂತಂ ನ ಪ್ರಿಯಾಪ್ರಿಯೇಸ್ಪೃಶತಃ ಇತಿಶ್ರುತೇಃ ಇತಿಚೇನ್ನ. ತಸ್ಯ ನಿತ್ಯಶರೀರಸತ್ವಾತ್. "ಸ್ಥಿರೈರಂಗೈಸ್ತುಷ್ಟುವಾಂಸಸ್ತನೂಭಿಃ ಇತಿಶ್ರುತಿಪ್ರಾಮಾಣ್ಯಾಚ್ಚ ಯಾತೇರುದ್ರ ಶಿವಾತನೂಃ" ಇತ್ಯಾದಿನಾ. ತಚ್ಛರೀರಸದ್ಭಾವಸ್ಯ ದರ್ಶಿತತ್ವಾತ್. ಅಕಾಯಮಶರೀರ ಮಿತ್ಯಾದಿವಾಕ್ಯಾನಿತು ಅನಿತ್ಯಶರೀರನಿಷೇಧಂ ಬೋಧಯಂತೀತಿ ಬೋಧ್ಯಂ. ||೮||

**ಮೂ॥ ಅಂಧಂತಮಃ ಪ್ರವಿಶಂತಿಯೇಽವಿದ್ಯಾಮುಪಾಸತೇ।**
**ತತೋಭೂಯಇವತೇ ತಮೋಯ ಉ ವಿದ್ಯಾಯಾ**
**ಗ' ರತಾಃ ||೯||**

---

ಲ್ಲದೆ "ಯಸ್ತುಸರ್ವಾಣಿ ಭೂತಾನಿ ಎಂಬ ಹಿಂದಣ ಮಂತ್ರದಲ್ಲಿರುವ ಯತ್ ಎಂಬ ಪದದಿಂದ ತೋರಿಸಿರುವ ಅಧಿಕಾರಿಯಾದ ಭಕ್ತನನ್ನು ಉದ್ದೇಶಮಾಡಿ "ಸಪರ್ಯಗಾತ್" ಎಂದು ಈ ಮಂತ್ರವು ಪ್ರವರ್ತಿಸಿರುವುದರಿಂದಲೂ, ಯತ್ ತತ್ ಶಬ್ದಗಳಿಗೆ ನಿತ್ಯಸಂಬಂಧವಿರುವುದರಿಂದಲೂ, ಯಾವ ಭಕ್ತನು ಶಿವನನ್ನು ಅಭಿನ್ನೋಪಾಸನೆಯಂ ಮಾಡುವನೋ! ಅವನು ಶುಕ್ರ ಅಕಾಯಾದಿಶಬ್ದವಾಚ್ಯವಾದ ಪರಬ್ರಹ್ಮವನ್ನು ಹೊಂದುವನು. ಎಂದು ಸ್ಪಷ್ಟಾರ್ಥವಾಗುವಾಗ ಶುಕ್ರಂ ಅವ್ರಣಂ ಮೊದಲಾದ ಶಬ್ದಗಳನ್ನು ಪುಲ್ಲಿಂಗಗಳನ್ನಾಗಿ ಕಲ್ಪಿಸುವುದು ಗೌರವ ದೋಷವನ್ನುಂಟುಮಾಡುವದು. ಛಾಂದಸವಾದುದರಿಂದ ಪುಲ್ಲಿಂಗವನ್ನು ಹೇಳುತ್ತೇವೆಯಂದರೆ ಸಮನ್ವಯವಾಗದಿದ್ದರೆ ಛಾಂದಸ ಪಕ್ಷವನ್ನು ಅಂಗೀಕರಿಸಬೇಕಲ್ಲದೆ, ಚನ್ನಾಗಿ ಅನ್ವಯಿಸುತ್ತಿರುವಾಗ ಛಾಂದಸತ್ವವನ್ನು ಅಂಗೀಕರಿಸಲಾಗುವದಿಲ್ಲವೆಂಬುವುದೇ ಶಾಂಕರೀಕಾರನಿಂದ ಬರಿಯಲ್ಪಟ್ಟ ಈ ಮಂತ್ರದ ಅಭಿಪ್ರಾಯವು. ||೮||

ಅರ್ಥ—ಯೇ—ಯಾರು, ಅವಿದ್ಯಾಂ—ಕರ್ಮವನ್ನೇ, ಉಪಾಸತೇ—ಆಚರಿಸುವರೋ; ತೇ—ಅವರು, ಅಂಧಂ—ಪ್ರಕಾಶವಿಲ್ಲದಿರುವ, ತಮಃ—ದುಃಖರೂಪವಾದ ಅಂಧಕಾರವನ್ನು, ಪ್ರವಿಶಂತಿ-ಸೇರುತ್ತಾರೆ; ಯೇಉ-ಯಾರು, ವಿದ್ಯಾಯಾಂ-



ಶಾಂ॥ ವಿದ್ಯಾವಿದ್ಯಾ ಸಮುಸಮುಚ್ಚಯ ವ್ಯತಿರೇಕೇಣ ನಕಿಂಚಿತ್ಫಲಮಿತ್ಯಾಹ ಅಂಧಂತಮ ಇತಿ.—ಯೇ ಜನಾಃ ಅವಿದ್ಯಾಂ ವಿದ್ಯಾಭಿನ್ನಾಂ, ಸ್ವಸ್ವರೂಪಜ್ಞಾನಭಿನ್ನಾಮಿತ್ಯರ್ಥಃ. ಯಜನಭಜನಾರ್ಪಣಾರ್ಪಿತ ಗ್ರಹಣಾದಿಕರ್ಮಸ್ವಾಸಕ್ತಾಃ ಕೇವಲಂ ತತ್ಪ್ರತಿಕ್ರಿಯಾಮುಪಾಸತೇ. ಅನುತಿಷ್ಠಂತಿ. ತೇ ಸ್ವಸ್ವರೂಪ ಶಿವಲಿಂಗಜ್ಞಾನರಹಿತಾಜನಾಃ ಅಂಧೋಯಥಾಗರ್ತಂ ಪ್ರವಿಶತಿ ಯಥಾ ಚಾಗ್ನಿನಾ ದಹ್ಯತೇ, ತಥಾಅಂಧಂ ಅದರ್ಶನಾತ್ಮಕಂತಮಃ ಆಣವಮಾಯೀಯ ಕಾರ್ಮ ಮಲರೂಪಂ ಪ್ರವಿಶಂತಿ, ಸಂಸಾರಚಕ್ರೇಭ್ರಮಂತೀತ್ಯರ್ಥಃ. ಯ ಉ ಯೇತು ವಿದ್ಯಾಯಾಂ ಆತ್ಮಸ್ವರೂಪಜ್ಞಾನ ಏವ ರತಾಃ ಕಾಯವಾಙ್ಮನಃ ಕರ್ಮಹಿತ್ವಾ "ಜ್ಞಾನಾದೇವತುಕೈವಲ್ಯಂ" ಇತ್ಯಾದಿ ವಾಕ್ಯಾನಾಮಕ್ಷರಾರ್ಥಮಾತ್ರಗ್ರಾಹಕಾಃ ಯಾವದ್ವೇದಾಂತವಾಕ್ಯಾನಿಸಾಕಲ್ಯೇನಾಜಾನಾನಾಸ್ಸಂತಃ ಆತ್ಮೈಕ್ಯಜ್ಞಾನೈಕಸಕ್ತಾಭವಂತಿ. ತೇ ತತಃ ತಸ್ಮಾದಂಧರೂಪಾತ್ತಮಸಃ, ಭೂಯ ಇವ ಬಹುತರಮೇವ ಪಂಗುರ್ಯಥಾಗ್ನಿಂ ತಥಾ ತಮಃ ಮಲಾತ್ಮಕಾನಲಂ, ಪ್ರವಿ

---

ಜ್ಞಾನವಂದರಲ್ಲಿಯೇ, ರತಾಃ—ಆಸಕ್ತರಾಗಿದ್ದಾರೆಯೊ; ತೇ—ಅವರು, ತತಃ—ದುಃಖರೂಪವಾದ ಅಂಧಕಾರಕ್ಕಿಂತಲೂ, ಭೂಯಇವತಮಃ—ಬಹುತರವಾದ ದುಃಖವನ್ನು, ಪ್ರವಿಶಂತಿ—ಪ್ರವೇಶಮಾಡುತ್ತಾರೆ.

ತಾ॥ ವಿದ್ಯೆಯಂದರೆ ಜ್ಞಾನವು. ಅವಿದ್ಯೆಯಂದರೆ ಕರ್ಮವು. ಲೋಕದಲ್ಲಿ ಯಾರು ಪರಮಾತ್ಮಸ್ವರೂಪ ಜ್ಞಾನವಿಲ್ಲದೆ ಕೇವಲ ಕರ್ಮಗಳನ್ನು ಆಚರಿಸುವರೋ? ಶಿವಲಿಂಗಪೂಜನ, ಶಿವಲಿಂಗಸ್ತೋತ್ರ, ಶಿವಲಿಂಗಾರ್ಪಣ ಶಿವಲಿಂಗಪ್ರಸಾದಗ್ರಹಣ ಮೊದಲಾದ ಪರಮಾತ್ಮ ಸಂಬಂಧವಾದ ಕ್ರಿಯೆಗಳಿಲ್ಲದೆ ಆತ್ಮೈಕ್ಯಜ್ಞಾನವಂದರಲ್ಲೇ ಯಾರು ಆಸಕ್ತರಾಗಿರುವರೊ? ಈ ಕೇವಲ ಜ್ಞಾನೈಕಪರರಿಗೂ ಕರ್ಮೈಕಪರರಿಗೂ ಸಂಸಾರಮಯವಾದ ದುಃಖವು ಬಿಡುಗಡೆಯಾಗುವುದಿಲ್ಲವು.

ಅಂದರೆ ಲೋಕದಲ್ಲಿ ಕೆಲ ವೈದಿಕರು ಜ್ಞಾನವು ಮೋಕ್ಷಕ್ಕೆ ಕಾರಣವೆಂದು ಹೇಳುವರು. ಕೆಲವರು ಕರ್ಮವೇ ಮುಕ್ತಿಗೆ ಕಾರಣವೆಂದು ಒಪ್ಪುವರು. ಜ್ಞಾನಕಾರಣವಾದಿಗಳೇ ಅದ್ವೈತಿಗಳು. ಕರ್ಮಕಾರಣವಾದಿಗಳೇ ಮೀಮಾಂಸಕರು. ಕರ್ಮ ಜ್ಞಾನಗಳೆರಡನ್ನು ಮುಕ್ತಿಕಾರಣವಾಗಿ ಶಕ್ತಿವಿಶಿಷ್ಟಾದ್ವೈತಿಗಳೆನಿಸಿದ ವೀರಶೈವರು ಅಂಗೀಕರಿಸಿರುವರು.

ಶಂತಿ. ಉಕ್ತಂಚ ಜ್ಞಾನಕರ್ಮಾನ್ಯತರಾಸಕ್ತಾನಾಂನಕಿಂಚಿದಪಿ ಪ್ರಯೋಜನ
ಮಿತಿ. ತದ್ಯಥಾ ‚‚ಜ್ಞಾನಂಪ್ರಧಾನಂನತುಕರ್ಮಹೀನಂ ಕರ್ಮಪ್ರಧಾನಂನತುಬಿ
ದ್ವಿಹೀನಂ । ತಸ್ಮಾದ್ದ್ವಯೋರೇವಭವೇತ್ರಸಿದ್ಧಿರ್ನಹ್ಯೇಕಪಕ್ಷೋವಿಹಗಃ
ಪ್ರಯಾತಿ'' ಉಕ್ತಂಚಸಿದ್ಧಾಂತಶಿಖಾಮಣೌ ‚‚ಅಂಧಪಂಗುವದನ್ಯೋನ್ಯಸಾಪೇ
ಕ್ಷೌ ಜ್ಞಾನಕರ್ಮಣೋಃ । ಫಲೋತ್ಪತ್ತೌವಿರಕ್ತಸ್ಯ ತಸ್ಮಾತ್ತದ್ವಯಮಾಚರೇತ್
ಉಕ್ತಂಚಶಿವರಹಸ್ಯೆ. ನಕ್ರಿಯಾರಹಿತಂಜ್ಞಾನಂ ನಜ್ಞಾನರಹಿತಾಕ್ರಿಯಾ । ಅಪ
ಶ್ಯನ್ನಂಧಕೋದಗ್ಧಃ ಪಶ್ಯನ್ಪಂಗುಶ್ಚದಹ್ಯತೇ'' ಉಕ್ತಂಚಾನ್ಯತ್ರ ಕುತಸ್ತ್ಯಾದಾಗ
ಮೊಪಹ್ನೆರ್ಮಂಥಾನಕ್ರಿಯಯಾವಿನಾ । ಆಗಮಶ್ಚಾತ್ಮಸಂಸ್ಥಸ್ಯ ಶಿವಸ್ಯಕ್ರಿಯ
ಯಾವಿನಾ'' ಉಕ್ತಂಚ ಸ್ಪಂದಪ್ರದೀಪಿಕಾಯಾಂ ಆಗೋಪಬಾಲಮನಿಶಂ ಭಗ
ವಂಸ್ತ್ವಮಿತ್ಥಂ ಜ್ಞಾತೋಪ್ಯುಪಾಯವಿರಹಾನ್ನತುಮೋಕ್ಷದೋಸಿ । ನಾಂ
ತಸ್ಥಿತಂಭವತಿ ಧೇನುಷುತೃಡ್ವಿಹರ್ತೃಕ್ಷೀರಂತದೇವಪುನರಭ್ಯವಹಾರತಸ್ಸ್ಯಾತ್''
ತಸ್ಮಾದೇಕೇನಜ್ಞಾನೇನ ಕರ್ಮಣಾವಾ ನೇಷ್ಟಾರ್ಥಸಿದ್ಧಿಸಂಭವಃ । ಕಿಂತುಸ
ಮುಚ್ಚಿತಜ್ಞಾನಕರ್ಮಣೋರೇವ ಸಫಲತ್ವಮಿತಿ ಫಲಿತಾರ್ಥಃ ॥೯॥

---

ವಸ್ತುತಃ ತನ್ನ ಆತ್ಮರಲ್ಲಿ ಯಾವ ವಿಧವಾದ ಜ್ಞಾನವು ಉಂಟಾಗುವು
ದೋ ಆ ಜ್ಞಾನಕ್ಕನುಗುಣವಾದ ಕ್ರಿಯೆಗಳನ್ನು ಶರೀರದಲ್ಲಿಯೂ, ವಾಕ್ಕಿನಲ್ಲಿ
ಯೂ, ಮನಸ್ಸಿನಲ್ಲಿಯೂ ಮಾಡುವುದರಿಂದಲೇ ಜ್ಞಾನವು ಫಲಕಾರಿಯಾಗುವ
ದು. ಇಲ್ಲವಾದರೆ ಜ್ಞಾನವು ನಿರರ್ಥಕವಾಗುವದು. ಲೋಕದಲ್ಲಿ ಗಂಗಾದರ್ಶನ
ಗಂಗಾಸ್ನಾನರೂಪವಾದ ಕ್ರಿಯೆಗಳಿಲ್ಲದೆಹೋದರೆ ಗಂಗಾನದಿಯ ಜ್ಞಾನವಿದ್ದ
ಮಾತ್ರದಿಂದ ಗಂಗಾನದಿಯಿಂದಾಗುವ ಫಲಗಳು ಆಗುವದಿಲ್ಲವು. ಆದುದರಿಂದ
ಕೇವಲ ಪರಮಾತ್ಮನ ಯಜನ ಭಜನಾದಿಗಳೂ ಪರಮಾತ್ಮನ ಜ್ಞಾನವೂ ಎರ
ಡೂ ಮೋಕ್ಷಹೇತುಗಳಾದುದರಿಂದ ಒಂದನ್ನು ಬಿಟ್ಟು ಒಂದರಿಂದ ಮುಕ್ತಿಯು
ಸಾಧ್ಯವಾಗುವದಿಲ್ಲ. ಪಕ್ಷಿಗಳಂತೆ ಇರುವ ಆತ್ಮರುಗಳಿಗೆ ಪರಮಾತ್ಮಜ್ಞಾನವು
ಪರಮಾತ್ಮಕ್ರಿಯೆಯು ಎರಡೂ ಎರಡು ರೆಕ್ಕೆಗಳಂತೆ ಇರುವವು. ಇವೆರಡೂ ಯಾ
ವವಿಧವಾದ ಅಪಾಯವಿಲ್ಲದಂತೆ ಸುಖವಾಗಿ ಪರಮಾತ್ಮ ಸಾಕ್ಷಾತ್ಕಾರವನ್ನು
ಮಾಡಿಸುವವು. ಪರಮಾತ್ಮ ಸಾಕ್ಷಾತ್ಕಾರವಂ ಮಾಡಿದವನೆ ದುಃಖರೂಪ
ವಾದ ಸಂಸಾರವನ್ನು ಹೊಂದುವದಿಲ್ಲವು. ಪಕ್ಷಿಗೆ ಒಂದು ರೆಕ್ಕೆಯು ಇದ್ದು
ಒಂದು ರೆಕ್ಕೆ ಇಲ್ಲವಾದರೆ ಪ್ರಯೋಜನವಿಲ್ಲವಷ್ಟೆ.



ಮತ್ತು ಜ್ಞಾನವು ಕಾಲಿದ್ದ ಕುರುಡನಂತಿಹುದು. ಕರ್ಮವು ಕಣ್ಣಿದ್ದ
ಕುಂಟನಂತಿಹುದು. ಕುರುಡನು ಕಾಲಿದ್ದರೂ ಕಣ್ಣಿಲ್ಲದ ಪ್ರಯುಕ್ತ ವಿಪ
ತ್ತನ್ನು ಪರಿಹರಿಸಿಕೊಳ್ಳದೆ ನಷ್ಟವನ್ನು ಹೊಂದುವನು. ಕುಂಟನು ಕಣ್ಣಿದ್ದರೂ
ಕಾಲಿಲ್ಲದ ಪ್ರಯುಕ್ತ ವಿಪತ್ತಿಗೀಡಾಗುವನು. ಕಣ್ಣಿದ್ದ ಕುಂಟನು ಕಾಲಿದ್ದ
ಕುರುಡನು ಇಬ್ಬರೂ ಪರಸ್ಪರ ಸಾಹಾಯಕರಾದರೆ ತಮ್ಮ ವಿಪತ್ತನ್ನು ಪರಿಹರಿ
ಸಿಕೊಳ್ಳುವರು. ಇದರಂತೆ ಕರ್ಮ ಜ್ಞಾನಗಳೆರಡರ ಸಹಾಯವುಳ್ಳವನೇ ಮು
ಕ್ತಿಯನ್ನು ಹೊಂದುವನು. ಕರ್ಮವಿಲ್ಲದ ಜ್ಞಾನವು, ಜ್ಞಾನವಿಲ್ಲದ ಕರ್ಮವು,
ಪ್ರಧಾನಗಳಲ್ಲವು. ಎರಡೂ ಒಬ್ಬನಲ್ಲಿ ಸನ್ನಿಹಿತವಾದರೇನೇ, ಫಲವು ಸಿದ್ಧಿಯಾ
ಗುವದು.

ಇದಲ್ಲದೆ ಎಲೈ ಪರಮಾತ್ಮನೆ! ದನಕಾಯುವವನು ಮೊದಲುಮಾಡಿ
ಸ್ತ್ರೀ ಪುರುಷರವರಿವಿಗೂ ಸಕಲ ಹೃದಯದಲ್ಲಿ ನೀನು ಸಾಕ್ಷಿಯಾಗಿರುವಿಯೆಂದು
ತಿಳಿದಿದ್ದರೂ ನಿನ್ನನ್ನು ಹುಡುಕುವ ಉಪಾಯವಂ ತಿಳಿಯದ ಜನಗಳು ನಿನ್ನ
ಸಾಕ್ಷಾತ್ಕಾರದ ಸುಖವನ್ನು ಹೊಂದದೆ ಸಂಸಾರ ಸಾಗರದಲ್ಲಿ ಮಗ್ನರಾಗಿ ಧಡ
ವನ್ನು ಸೇರದೆ ಕಷ್ಟಪಡುತ್ತಿರುವರೆಂದು ಒಬ್ಬ ಮಹಾ ಕವಿಯು ಹೇಳಿರುವುದ
ರಿಂದಲೂ, ಹಸುಗಳ ಹೊಟ್ಟೆಯಲ್ಲಿ ಹಾಲಿದ್ದರೂ ಆ ಹಾಲು ಉಪಾಯದಿಂದ
ಹೊರಗೆ ಬಂದಾಗ ತೃಷೆಯು ಶಾಂತವಾಗುವಂತೆಯೂ, ಬನ್ನೀಮರದ ಮಧ್ಯ
ದಲ್ಲಿ ಬೆಂಕಿಯುಂಟೆಂದು ನಾವುಗಳು ತಿಳಿದಿದ್ದರೂ ಮಥನಕ್ರಿಯೆಯಿಲ್ಲದೆ ಸಾಕ್ಷಾ
ತ್ಕಾರವಾಗದಂತೆಯೂ, ಮಹಾಲಿಂಗವು ನಿಖಿಲ ಪ್ರಾಣಿಗಳ ಹೃದಯ ಕುಹರ
ದಲ್ಲಿ ವ್ಯಾಪಕವಾಗಿದ್ದರೂ ಗುರುಗಳು ಹೇಳಿದಪ್ರಕಾರ ಸಾಕ್ಷಾತ್ಕಾರೋಪಾ
ಯಗಳೆನಿಸಿದ ಭಕ್ತಿಧ್ಯಾನ, ಯಜನ, ಪೂಜನ, ಅರ್ಪಣ, ಪ್ರಸಾದ, ಸೇವನಗ
ಳಿಲ್ಲವಾದರೆ ಪರಮಾತ್ಮಸ್ವರೂಪ ಜ್ಞಾನವನ್ನು ಹೊಂದದೆ ಮಹಾಲಿಂಗದ
ಸಮರಸಭಾವದಿಂದ ದೂರನಾಗಿ ಸಂಸಾರದಿಂದ ಉತ್ತೀರ್ಣನಾಗಿ ಪರಮಾ
ನಂದಪ್ರಾಪ್ತಿರೂಪವಾದ ನಿತ್ಯ ಸುಖವನ್ನು ಹೊಂದಲಾರನು. ಈ ವಿಷ
ಯದಲ್ಲಿ ಸ್ಪಂದಪ್ರದೀಪಿಕೆ, ಸಿದ್ಧಾಂತಶಿಖಾಮಣಿ, ಅನುಭವಸೂತ್ರ ಮೊದ
ಲಾದ ಗ್ರಂಥಗಳೇ ಪ್ರಮಾಣವಾದುದರಿಂದ ಕರ್ಮ ಜ್ಞಾನಗಳೆರಡರ ಸಹಾಯ
ದಿಂದಲೇ ಮುಕ್ತಿಸುಖವು ಲಭಿಸುವುದೆಂದು ಈ ಉಪನಿಷದ್ವ್ಯಾಖ್ಯಾಕಾರರ
ಅಭಿಪ್ರಾಯವು. ॥೯॥

**ಮೂ॥ ಅನ್ಯದಾಹುರ್ವಿದ್ಯಯಾಽನ್ಯದಾಹುರವಿದ್ಯಯಾ।**
**ಇತಿಶುಶ್ರುಮಧೀರಾಣಾಂ ಯೇನಸ್ತದ್ವ್ಯಾಚಚಕ್ಷಿರೆ ॥೧೦॥**

ಶಾಂ॥ ಏಕೈಕಾನುಷ್ಠಾನೆ ಸಮುಸಮುಚ್ಚಯಮಂತರಾ ನ ಪರಮಪುರುಷಾರ್ಥಸಿದ್ಧಿಃ. ಕಿಂತು ಪುನರಾವೃತ್ತಿಸಹಿತ ಯತ್ಕಿಂಚಿತ್ಫಲಂಭವತಿ. ಅಥವಾ ಸಮುಸಮುಚ್ಚಯ ವ್ಯತಿರೇಕೇಣ ಜ್ಞಾನರಾಹಿತ್ಯ ವಿಶಿಷ್ಟಕರ್ಮಣಾವಾ, ಕರ್ಮಾಭಾವವಿಶಿಷ್ಟಜ್ಞಾನೇನವಾ ನಹಿ. ‹‹ವಿಮುಕ್ತಶ್ಚ ವಿಮುಚ್ಯತೆ›› ಇತ್ಯಾದಿ ಶ್ರುತಿಸಿದ್ಧನಿತ್ಯಾಮೃತತ್ವಪ್ರಾಪ್ತಿರ್ಭವತಿ. ಕಿಂತು ತದನ್ಯ ಘೋರನರಕಪ್ರಾಪ್ತಿರೇವ ಭವತೀತ್ಯಾಹ. ಅನ್ಯದಾಹುರಿತ್ಯಾದಿನಾ:—ವಿದ್ಯಯಾ ಪತಿಧರ್ಮಾಭಾವ ವಿಶಿಷ್ಟಾತ್ಮಸ್ವರೂಪಜ್ಞಾನೇನ, ಅನ್ಯದೇವ ‹‹ನಸಪುನರಾವರ್ತತೆ ನಸಪುನರಾವರ್ತತೇ›› ಇತ್ಯಾದಿ ಶ್ರುತಿಸಿದ್ಧಾತ್. ಮೋಕ್ಷಾತ್ ಅನ್ಯದೇವ, ಪುನರಾವೃತ್ತಿಸಹಿತದೇವಲೋಕಾದಿ ಪ್ರಾಪ್ತಿರೂಪಂಫಲಂ. ಅಥವಾ ನಿತ್ಯಾನಂದವಿಪರೀತದುಃಖಮಯ ಘೋರನಾರಕೀಯ ಜನ್ಮಪ್ರಾಪ್ತಿರೂಪಫಲಮೇವ ಭವತೀತ್ಯಾಹುಃ. ಅವಿದ್ಯಯಾ—ಜ್ಞಾನಾಸಮಾನಾಧಿಕರಣಕರ್ಮಣಾ, ಅನ್ಯತ್ ಪಿತೃಲೋಕಪ್ರಾಪ್ತಿರೂಪಂ ಫಲಮಾಹುಃ. ಅಥವಾ ಅನ್ಯತ್ ಮುಖ್ಯಪುರುಷಾರ್ಥಭಿನ್ನ ಶುನಕಸೂಕರಾದಿಜನ್ಮರೂಪಂ ಫಲಮಾಹುಃ. ಇತಿ ಏವಂ, ಧೀರಾಣಾಂ ವೀರಾಣಾಂ ವಚನಂ ಶುಶ್ರುಮ, ಶ್ರುತವಂತಃ, ಯೇ ಶಿವಜ್ಞಾನಿನಃ ನಃ ಅಸ್ಮಭ್ಯಂ ತತ್ ಕರ್ಮಚ ಜ್ಞಾನಂಚ. ವ್ಯಾಚಚಕ್ಷಿರೆ, ವ್ಯಾಖ್ಯಾತವಂತಃ. ವಯಂತು ಜ್ಞಾನಕರ್ಮಸಮು

---

ಅರ್ಥ— ವಿದ್ಯಯಾ—ಕರ್ಮಶೂನ್ಯವಾದ ಜ್ಞಾನದಿಂದ, ಅನ್ಯದೇವ—ಮೋಕ್ಷಕ್ಕಿಂತಲೂ ಬೇರೆಯಾದ ಫಲವನ್ನು, ಆಹುಃ—ಹೇಳುತ್ತಾರೆ. ಅವಿದ್ಯಯಾ—ಜ್ಞಾನಶೂನ್ಯವಾದ ಕರ್ಮದಿಂದ, ಅನ್ಯದೇವ--ಬೇರೆಯಾದ ಪಿತೃಲೋಕಪ್ರಾಪ್ತಿರೂಪವಾದ ಫಲವನ್ನು, ಆಹುಃ—ಹೇಳುತ್ತಾರೆ. ಇತಿ—ಈರೀತಿಯಾಗಿ, ಧೀರಾಣಾಂ—ವೀರರ, ವಚನಂ—ಮಾತನ್ನು, ಶುಶ್ರುಮ—ಕೇಳಿ, ಯೆ—ಯಾವ ಶಿವಜ್ಞಾನಿಗಳು, ನಃ—ನಮಗೆ, ತತ್—ಕರ್ಮಜ್ಞಾನಗಳೆರಡನ್ನೂ, ವ್ಯಾಚಚಕ್ಷಿರೆ—ಹೇಳುತ್ತಾರೆ.

ತಾ॥ ಜ್ಞಾನಶೂನ್ಯವಾದ ಕರ್ಮಕ್ಕೆ ಮೋಕ್ಷರೂಪವಾದ ಫಲವಿಲ್ಲವು. ಕರ್ಮಶೂನ್ಯವಾದ ಜ್ಞಾನಕ್ಕೂ ಮೋಕ್ಷರೂಪವಾದ ಫಲವು ದೊರೆಯದು. ಕರ್ಮವಿಲ್ಲದ ಜ್ಞಾನದಿಂದ ದೇವತಾಲೋಕಪ್ರಾಪ್ತಿಯು. ಅಥವಾ ಶರೀರಧಾರಣರೂಪವಾದ ಫಲವು ದೊರೆಯುವದು. ಜ್ಞಾನಶೂನ್ಯವಾದ ಕರ್ಮದಿಂದ ಪಿತೃಲೋಕಪ್ರಾಪ್ತಿಯು. ಅಥವಾ ನಿತ್ಯಾನಂದಕ್ಕೆ ವಿರುದ್ಧವಾದ ದುಃಖಮಯವಾದ ಭಯಂಕರವಾದ ಕ್ರಿಮಿಕೀಟಾದಿ ಜನ್ಮಗಳನ್ನು ಪಡೆಯುವರು. ಆದುದರಿಂದ ಜ್ಞಾನಕರ್ಮಗಳೆರಡರಲ್ಲಿಯೂ ಆಸಕ್ತಿಯುಳ್ಳವರಾಗಿ ನಿತ್ಯಾನಂದ ಪ್ರಾಪ್ತಿಯನ್ನು ಪಡೆಯಬೇಕಲ್ಲದೆ, ಒಂದೊಂದರಲ್ಲಿ ಆಸಕ್ತರಾಗಿ ಅನಿತ್ಯವಾದ ಲೋಕಾಂತರವನ್ನಾಗಲಿ, ಶುನಕ ಸೂಕರ ಕ್ರಿಮಿಕೀಟಾದಿ ದುಃಖಮಯವಾದ ಜನ್ಮಗಳನ್ನು ಪಡೆಯಕೂಡದೆಂಬುದೇ ಈ ಮಂತ್ರದ ಮುಖ್ಯಾಶಯವು.



ಇಲ್ಲಿ ಕರ್ಮವೂ ಸಹ, ಮುಕ್ತಿಗೆ ಕಾರಣವೆಂದು ಸ್ಪಷ್ಟವಾಗುತ್ತೆಯಷ್ಟೆ? ಕರ್ಮವೆಂದರೆ ನಿಷ್ಕಾಮವಾದ ಪಶುಕರ್ಮವೆಂದು ಹೇಳುವುದುಂಟು. ಈ ಜ್ಯೋತಿಷ್ಟೋಮಾದಿ ಪಶುವಿಶಸನರೂಪವಾದ ಕರ್ಮವನ್ನು ಜ್ಞಾನ ಕರ್ಮ ಸಮುಚ್ಚಯದಲ್ಲಿ ಶೇರಿಸಲಾಗುವುದಿಲ್ಲವು. ಈ ಪಶುಕರ್ಮವು ಪತಿಕರ್ಮಾಧಿಕಾರಕ್ಕೆ ಉಪಯೋಗಿಗಳಾಗಿ ಪರಂಪರೆಯಿಂದ ವಿನಿಯೋಗವೇ ಹೊರತು ಸಾಕ್ಷಾತ್ ವಿನಿಯೋಗವಿಲ್ಲವು. ಇದರಿಂದ ಪತಿಕರ್ಮವೆಂದೆನಿಸಿದ ಮಹಾಲಿಂಗಯಜನ ಮಹಾಲಿಂಗಭಜನ ಮಹಾಲಿಂಗಾರ್ಪಣ ಅರ್ಪಿತಪ್ರಸಾದಗ್ರಹಣ ಮೊದಲಾದವುಗಳೇ ಮೋಕ್ಷಕ್ಕೆ ಸಾಕ್ಷಾತ್ಕಾರಣವು ಎಂದು ವೀರಶೈವಸಿದ್ಧಾಂತಮುಕ್ಕಂ.

ಇದರಿಂದ ವೀರಶೈವರಿಗೆ ಪತಿಕರ್ಮಗಳ ಹೊರತು ಪಶುಕರ್ಮಗಳಿಲ್ಲವೆಂದೂ, ಪಶುಕರ್ಮಗಳೆಲ್ಲಾ ಇದರ ಹಿಂದಣ ಜನ್ಮದಲ್ಲಿಯೇ ಮಾಡಿ ಅದರ ಪುಣ್ಯಪ್ರಭಾವದಿಂದ ಭಾಕ್ತಿಕವಾದ ಈ ಮತದಲ್ಲಿ ಉತ್ಪತ್ತಿಯೆಂದೂ ತಿಳಿಯತಕ್ಕದ್ದು. ಈ ವಿಷಯದಲ್ಲಿ ‹‹ಅನೇಕಜನ್ಮಸಿದ್ಧಾನಾಂ ಶ್ರೌತಸ್ಮಾರ್ತಾನುವರ್ತಿನಾಂ। ನರಾಣಾಂಕ್ಷೀಣಪಾಪಾನಾಂ ಶಿವೇಭಕ್ತಿಃಪ್ರಜಾಯತೆ›› ಮೊದಲಾದವುಗಳೇ ಪ್ರಮಾಣಗಳಾಗಿವೆ.

ಹಾಗಾದರೆ ಎಲೈ ವೀರಶೈವನೆ! ‹‹ಕ್ಷೀಯಂತೆಚಾಸ್ಯಕರ್ಮಾಣಿ›› ಮೊದಲಾದ ವಾಕ್ಯಗಳಿಂದ ಪರಮಾತ್ಮಜ್ಞಾನದಿಂದ ಸಕಲ ಕರ್ಮಗಳು ನಷ್ಟವಾಗುವವು ಎಂಬ ಅಭಿಪ್ರಾಯವು ಸ್ಪಷ್ಟವಾಗಿರುವಲ್ಲಿ ಜ್ಞಾನಕರ್ಮಸಮುಚ್ಚಯಕ್ಕೆ ಅವಕಾಶವೇ ಇಲ್ಲವಲ್ಲಾ ಅಂದರೆ.

ಚ್ಚಯವಾದಿನಃ. ಸಮುಚ್ಚಯ ಘಟಕ ಕರ್ಮಣಿ ಫಲಾಭಿಸಂಧಿರಹಿತ ಪಶುಕ
ರ್ಮಣಾ ನಾಂತರ್ಭಾವಃ. ಕಿಂತು ತೇಷಾಂ ಪತಿಧರ್ಮ ಸಮರ್ಪಣತ್ವೇನ ಪರಂಪರ
ಯಾ ವಿನಿಯೋಗ ಇತಿ ವದಾಮಃ. ತದುಕ್ತಂ ಪ್ರಥಮತಏವ ‹‹ಅನೇಕಜನ್ಮ ಶು
ದ್ಧಾನಾಂ›› ಇತ್ಯಾದಿ ನವಯಂ ಬ್ರಹ್ಮ ಜ್ಞಾನ್ಯೈಕ ನಾಶ್ಯಾನಿ ಕರ್ಮಾಣಿ ಕರ್ಮ
ಫಲಾನೀತಿ ಜಾನೀಮಃ. ಶಿರೋರೋಗನಾಶಾಯೌಷಧಿ ಪರಿಜ್ಞಾನಂನಶಕ್ಯಂ
ಲೇಪನಮಂತರಾ ವ್ಯಾಧ್ಯನಿವೃತ್ತೇಃ. ಜ್ಞಾನಮಂತರಾ ಲೇಪನಾಸಂಭವೇನಚ,
ಜ್ಞಾನಕರ್ಮಭ್ಯಾಂ ಸಮುಚ್ಚಿತಾಭ್ಯಾಂ ಈಶ್ವರಾರ್ಪಣಬುಧ್ಯುಪಜೀವಿಭ್ಯಾಂ
ಫಲಾಭಿಸಂಧಿರಹಿತಾಭ್ಯಾಂ ಈಶ್ವರಾರ್ಪಣಬುಧ್ಯುಪಜೀವಿಭ್ಯಾಂ ಫಲಾಭಿಸಂಧಿ
ರಹಿತಾಭ್ಯಾಂ ನಿತ್ಯಾಮೃತತ್ವಪ್ರಾಪ್ತಿರ್ಭವತೀತ್ಯಸ್ಮಾಕಮಾಶಯಃ.

---

ಇಲ್ಲಿ ಕರ್ಮಕ್ಷಯವೆಂದರೆ ದಂಡಭಾಂಡನ್ಯಾಯದಂತೆ ಧ್ವಂಸವೆಂಬು
ಅರ್ಥವಲ್ಲವು. ಕರ್ಮಗಳು ತಮ್ಮ ತಮ್ಮ ಐಹಿಕ ಕಾರ್ಯಗಳನ್ನುಂಟುಮಾಡದೆಯೂ,
ಆ ಕಾರ್ಯದ ಭೋಗವನ್ನುಂಟುಮಾಡದೆಯೂ, ಇರುವುದೇ ಕರ್ಮಕ್ಷಯ
ವೆಂದು ತಾತ್ಪರ್ಯವು. ಈ ವಿಷಯದಲ್ಲಿ ಅನುಭವಸೂತ್ರವೆಂಬ ಗ್ರಂಥವು ಪ್ರಮಾ
ಣವಾಗಿರುವದು. ಸುಟ್ಟುಹೋದ ಬಟ್ಟೆಯು (ದಗ್ಧಪಟವು) ಹೊದ್ದುಕೊಳ್ಳುವು
ದಕ್ಕೆ ಬರುವುದಿಲ್ಲ. ಬಟ್ಟೆಯಂತೆ ಕಾಣುವುದಲ್ಲದೆ ಆ ಬಟ್ಟೆಯಲ್ಲಿ ಯಾವ ಕ್ರಿಯಾ
ಕಾರಿತ್ವವೂ ಇರುವದಿಲ್ಲ. ಇದರಂತೆ ಶಿವಜ್ಞಾನಿಯಾದ ಶಿವಯೋಗಿಯಿಂದ
ಮಾಡಲ್ಪಡುವ ಕರ್ಮಗಳೆಲ್ಲವೂ ಐಹಿಕಫಲಗಳಿಗೆ ಸಾಧನಗಳಾಗುವದಿಲ್ಲವು. ಫಲೇ
ಚ್ಛೆಯಿಂದ ಮಾಡಲ್ಪಡುವ ಕ್ರಿಯೆಗಳೆಲ್ಲವೂ ಜ್ಞಾನಕ್ಕೆ ವಿರೋಧಿಯಾಗುವವು.
ನಿಷ್ಕಾಮದಿಂದ ಮಾಡುವ ಕರ್ಮವು ಪ್ರತಿಬಂಧಿಯಾಗದೆ ಜ್ಞಾನದೊಡನೆ ಕೇರಿ
ಕೊಂಡು ಮುಕ್ತಿಗೆ ಸಹಾಯಮಾಡುವದು. ಕರ್ಮವು ಐಹಿಕಫಲವನ್ನು ಬಿಟ್ಟಿ
ದ್ದರೂ ಅದಕ್ಕೆ (ಕರ್ಮಕ್ಕೆ) ಮುಕ್ತಿರೂಪವಾದ ನಿತ್ಯಾನಂದವನ್ನು ಕೊಡುವ
ಸಾಮರ್ಥ್ಯವುಂಟು. ಚಿತ್ರಪಟದಲ್ಲಿರುವ ಸ್ತ್ರೀಯಳಿಗೆ ಸ್ತ್ರೀಕಾರ್ಯವೆನಿಸಿದ
ಭೋಗಾದಿಕಾರ್ಯಗಳಿಲ್ಲವಾದರೂ ಪುರುಷರಿಗೆ ದರ್ಶನಾನಂದ ಜನನ ಸಾಮ
ರ್ಥ್ಯವಿರುತ್ತದೆಯಷ್ಟೆ? ಹುರಿದ ಕಡಲೆಯಲ್ಲಿ ಅಂಕುರಿಸುವ ಶಕ್ತಿಯು ನಾಶವಾಗಿ
ದ್ದರೂ ಅವುಗಳನ್ನು ತಿಂದವರಿಗೆ ಒಂದುವಿಧವಾದ ಆನಂದವನ್ನುಂಟುಮಾಡುತ್ತದೆ
ಅಲ್ಲವೆ? ಶಿವಾದ್ವೈತಿಯಾದ ಶಿವಯೋಗಿಯು ಭಸ್ಮರುದ್ರಾಕ್ಷ ಪಾದೋದಕ
ಗ್ರಹಣ, ಪ್ರಸಾದಗ್ರಹಣ, ಯಜನ, ಭಕ್ತಿ, ಭಜನ ಮೊದಲಾದ ಪತಿಕರ್ಮಗಳು



ನಚ ‹‹ಕ್ಷೀಯಂತೇಚಾಸ್ಯಕರ್ಮಾಣಿ›› ಇತ್ಯನೇನ ಕರ್ಮಣಾಂ ಜ್ಞಾನ
ನಾಶ್ಯತ್ವಸ್ಯೋಕ್ತತ್ವಾತ್, ಕಥಂ ಜ್ಞಾನಸಮಾನಾಧಿಕರಣ್ಯಂ ಕರ್ಮಣಇತಿ
ವಾಚ್ಯಂ. ಕರ್ಮಕ್ಷಯೋನಾಮ; ಸ್ವಕಾರ್ಯಾನುತ್ಪಾದಕತ್ವೇನ ಭರ್ಜಿತಬೀಜವತ್
ಭೋಗಾಸಮರ್ಪಿತತ್ವಮೇವೇತ್ಯಸ್ಮದಭಿಮತತ್ವಾತ್. ಉಕ್ತಂಚಾನುಭವಸೂತ್ರೇ››
ಅದ್ವೈತಭಕ್ತಿಯುಕ್ತಸ್ಯ ಯೋಗಿನಸ್ಸಕಲಕ್ರಿಯಾ | ಅಸ್ತಿದಗ್ಧಪಟನ್ಯಾಯಾತ್
ಕ್ರಿಯಾಮಾತ್ರಾಹಿನಕ್ರಿಯಾ‖ ಕ್ರಿಯಾಮಾತ್ರಾಕ್ರಿಯಾನ್ಯೈವ ಪ್ರತಿಬಂಧಾಯದೇ
ಹಿನಾಂ| ಕೇವಲಾ ನಿರ್ಮಲಾ ಶುದ್ಧಾ ಫಲಕಾಮವಿವರ್ಜಿತಾ‖ ಫಲಕಾಮಪ್ರಯು
ಕ್ತಾಹಿ ಕ್ರಿಯಾ ಸಾಪ್ರತಿಬಧ್ಯತೆ | ಕ್ರಿಯಾಮಾತ್ರಾನಬಂಧಾಯೇತ್ಯತ್ರಾಶ್ಚರ್ಯಂ
ಕಿಮುಚ್ಯತಾಂ ‖ ಫಲಕಾಮತಯಾ ಕರ್ಮಕರಣಂ ಪ್ರತಿಬಧ್ಯತೆ | ಸಕರ್ಮ
ಮಾತ್ರ ಕರಣಂ ತಸ್ಮಾತ್ಕರ್ಮಫಲಂತ್ಯಜೇತ್ | ತ್ಯಕ್ತೇಕರ್ಮಫಲೇಷ್ಯಸ್ಯವಿಲಾ
ಸೋ ನೈವ ಬಾಧತೆ | ಯಥಾ ಚಿತ್ರ ಪಟ ಸ್ತ್ರೀಣಾಂ ವಿಲಾಸೋ ನೈವಬಾ

---

ಐಹಿಕಭೋಗವನ್ನುಂಟುಮಾಡದಿದ್ದರೂ ನಿತ್ಯಾನಂದರೂಪವಾದ ಮುಕ್ತಿಸಾ
ಮ್ರಾಜ್ಯವನ್ನುಂಟುಮಾಡುವದು. ಲೋಕದಲ್ಲಿ ಬಂಜೆಯಾದ ಹೆಂಗಸು ಐಹಿಕ
ಫಲವೆನಿಸಿದ ಪುತ್ರೋತ್ಪತ್ತಿಯನ್ನು ಪಡೆಯದಿದ್ದರೂ ಪತಿಗೆ ಸುಖವನ್ನುಂಟುಮಾ
ಡುವಂತೆ, ಶಿವಾದ್ವೈತಿಯ ಕ್ರಿಯೆಗಳೆಲ್ಲವು ತಮ್ಮ ಕಾರ್ಯಗಳನ್ನು ಬಿಟ್ಟಿದ್ದರೂ
ಸ್ವಾತ್ಮಾನಂದಸುಖವನ್ನುಂಟುಮಾಡುವುದರಲ್ಲಿ ನಿಯತಕಾರಣವೆಂದು ಹೇಳಲು
ಅಭ್ಯಂತರವಿಲ್ಲವಾದುದರಿಂದ ಫಲವಿಚಾರಮಾಡದೆ ಸ್ವಕರ್ಮವನ್ನು ಆಚರಿಸಲೇ
ಬೇಕೆಂದು (ಕರ್ಮಣ್ಯೇವಾಧಿಕಾರಃ) ಗೀತಾಶ್ಲೋಕದಲ್ಲಿಯೂ ಸ್ಪಷ್ಟವಾಗು
ವದು. ಇದರಿಂದ ಜ್ಞಾನಕ್ಕೂ ಪಶುಕರ್ಮಕ್ಕೂ ವಿರೋಧವಿದ್ದರೂ ಜ್ಞಾನಕ್ಕೂ
ಪತಿಕರ್ಮಕ್ಕೂ ವಿರೋಧವಿಲ್ಲವು. ಪರಸ್ಪರ ವಿರೋಧವಿದ್ದ ಕಡೆಯಲ್ಲಿಯೇ ಒಂದ
ರಿಂದ ಮತ್ತೊಂದಕ್ಕೆ ನಾಶವನ್ನು ಹೇಳಬಹುದು. ‹‹ಸಕರ್ಮಮಾತ್ರಕರಣಂ››
ಎಂದು ಅನುಭವಸೂತ್ರ ಮೊದಲಾದ ಗ್ರಂಥಗಳ ರೀತಿಯಾಗಿ ಕರ್ಮಜ್ಞಾನಗಳೆ
ರಡಕ್ಕೂ ವಿರೋಧವಿಲ್ಲವಾದಪ್ರಯುಕ್ತ ಎರಡರಲ್ಲಿ ಒಂದಕ್ಕೆ ನಾಶವಂ ಹೇಳಲಾ
ಗುವದಿಲ್ಲವು.

ಇಲ್ಲಿ ‹‹ನಹ್ಯುತ್ಪನ್ನಸ್ಯಕರ್ಮಾರಂಭೋಯುಕ್ತಃ›› ಅಂದರೆ ಬ್ರಹ್ಮಜ್ಞಾನ
ವುಂಟಾದಮೇಲೆ ಕರ್ಮಾಚರಣೆಯು ಯುಕ್ತವಲ್ಲ›› ಎಂಬುಕ್ತಿಯಮೇಲೆ ಕರ್ಮ
ಜ್ಞಾನಗಳು ಒಂದಕ್ಕೊಂದು ವಿರೋಧಿಗಳಾದ್ದರಿಂದ ಕರ್ಮವು ಜ್ಞಾನವನ್ನು

ಧತೇ | ತಥಾ ದ್ವೈತಕ್ರಿಯಾಣಾಂಚ ವಿನಾಶೋ ನೈವ ಬಾಧತೇ | ನಪ್ರರೋ ಹಂತಿ ಬೀಜಾನಿ ಯಥಾ ಭ್ರಷ್ಟಾನಿ ಭೂತಲೇ | ಅದ್ವೈತಭಕ್ತಿ ಯುಕ್ತಾನಿ ಕರ್ಮಾಣಿ ಚ ತಥೈವ ಹಿ | ಯಥಾವಂಧ್ಯಾಸ್ತ್ರಿಯೋ ಲೋಕೇ ಫಲಾಯ ನ ಕದಾಚನ | ತಥಾದ್ವೈತ ಕ್ರಿಯಾ ಲೋಕೇ ಫಲಾಯ ನಕದಾಚನೇತಿ. ಕರ್ಮ ಣ್ಯೇವಾಧಿಕಾರಸ್ತೇ ಮಾಫಲೇಷು ಕದಾಚನ ಇತಿಕೃಷ್ಣೋಕ್ತತ್ವಾಚ್ಚ, ತಸ್ಮಾನ್ನ ಪತಿಕರ್ಮಣಾ ಜ್ಞಾನಸ್ಯವಿರೋಧಃ. ಅನ್ಯಥಾ ತವ ವಿರೋಧಸ್ಫೂರ್ತಿರೇವ ನಸ್ಯಾತ್. ಜ್ಞಾನಕರ್ಮ ಜ್ಞಾನಮಂತರಾ ತಯೋರ್ವಿರೋಧ ಇತಿಕಥಂವಾ ಜ್ಞಾತುಂಶಕ್ಯತೇ? ಯಾನಿತು ಸ್ವರ್ಗಾದ್ಯನಿತ್ಯಫಲಕಾನಿ ಕರ್ಮಾಣಿ ತೈಸ್ಸಹ ನಿತ್ಯಮೋಕ್ಷಫಲಕ ಜ್ಞಾನೇನ ವಿರೋಧಸ್ಸ್ಯಾತ್. ನಿತ್ಯಮೋಕ್ಷಫಲಕ ಪತಿಕ ರ್ಮಭಿ ರ್ನೈವ ವಿರೋಧಃ. ತಸ್ಮಾನ್ನಜ್ಞಾನಕರ್ಮಣೋರ್ವಿರೋಧಂಪ್ರಕಲ್ಪ್ಯ ಸಮುತ್ಪನ್ನಜ್ಞಾನಸ್ಯ ಕರ್ಮಾರಂಭೋ ಯುಕ್ತ ಇತ್ಯುಕ್ತಮುಪಪನ್ನಂಭವತಿ.

---

ಒದೆಯುವದು. ಜ್ಞಾನವು ಕರ್ಮವನ್ನು ಒದೆಯುವದು. ಎರಡಕ್ಕೂ ಸಾಮಾನಾಧಿಕರಣ್ಯವೇ ಇಲ್ಲವೆಂದು ಕೆಲವರು ಆಕ್ಷೇಪಿಸುವರು. ಹಾಗೆ ಆಕ್ಷೇಪಿಸುವವರನ್ನುದ್ದೇಶಿಸಿ ನಾವು ಹೀಗೆ ಕೇಳುತ್ತೇವೆ. ನೀನು ಹೇಳುವ ವಿರೋಧವೆಂಬುವದು ಸರ್ಪ ಮುಂಗಸಿ ಎರಡರಲ್ಲಿ ಇರುವದು. ಸರ್ಪವಿದ್ದಲ್ಲಿ ಮುಂಗಸಿ ಇರುವುದಿಲ್ಲ. ಮುಂಗಸಿಯಿದ್ದಲ್ಲಿ ಸರ್ಪವಿರುವುದಿಲ್ಲ. ಇದಲ್ಲವೆ; ವಿರೋಧ ಶಬ್ದದ ಅರ್ಥ. ಇಲ್ಲಿ ಜ್ಞಾನಕರ್ಮಗಳಿಗೆ ವಿರೋಧವನ್ನು ನೀವು ಹೇಳುತ್ತೀರಿ. ಆದರೆ ಈ ಜ್ಞಾನ ಕರ್ಮಗಳೆರಡನ್ನೂ ತಿಳಿದುಕೊಂಡು ಹೇಳುತ್ತೀರೊ? ತಿಳಿಯದೆ ಹೇಳುತ್ತೀರೊ? ತಿಳಿಯದೆ ಹೇಳುತ್ತೇವೆ ಅಂದರೆ ತಿಳಿಯದೆ ಇರುವುದು ಯಾವುದನ್ನೂ ಹೇಳುವುದಕ್ಕೆ ಆಗುವದಿಲ್ಲ. ತಿಳಿದೇ ಹೇಳುತ್ತೇವೆ ಅಂದರೆ ನಿಮ್ಮ ತಿಳಿವಳಿಕೆ ಎಂಬ ಜ್ಞಾನವಂದರಲ್ಲಿ ಜ್ಞಾನಕರ್ಮಗಳೆರಡೂ ಕೂಡಿಕೊಂಡಿರುವಂತೆಯೇ ಆಯಿತು. ಜ್ಞಾನಕರ್ಮಗಳೆರಡಕ್ಕೂ ವಿರೋಧವೆಂಬುವ ವಚನಕ್ಕೆ ಅವಕಾಶವೇ ಇಲ್ಲದಂತಾಯಿತು. ಆದುದರಿಂದ ಕರ್ಮಜ್ಞಾನಗಳೆರಡಕ್ಕೂ ವಿರೋಧವಿಲ್ಲವೆಂಬುವುದೇ ಸಿದ್ಧಾಂತಸಿದ್ಧವಾಗುವದು.

ಹಾಗಾದರೆ "ನಕರ್ಮಣಾ" ಕರ್ಮದಿಂದ ಮುಕ್ತಿಯುಂಟಾಗುವದಿಲ್ಲವು "ನಾಸ್ತ್ಯಕೃತಃಕೃತೇನ" ಜನ್ಯವಾದ ಕರ್ಮದಿಂದ ಅಜನ್ಯವಾದ ಮುಕ್ತಿಯು ಲಭಿಸದು, ಎಂಬುವ ಶ್ರುತಿಗಳು ಯಾವ ವಿಧವಾದ ಕರ್ಮದಿಂದಲೂ ಮು



ನನು "ನಕರ್ಮಣಾ ನಪ್ರಜಯಾ ಧನೇನತ್ಯಾಗೇನೈಕೇಮೃತತ್ವಮಾನಶುಃ" "ನಾನ್ಯತ್ರಕರ್ಮಸಂತ್ಯಾಗಾನ್ನಮೋಕ್ಷಂ ವಿಂದಂತಿಮಾನವಾಃ" "ನಾಸ್ತ್ಯಕೃತಃಕೃತೇನ" ಇತ್ಯಾದಿನಾ ಕರ್ಮಣೋ ಮೋಕ್ಷಾಜನಕತ್ವಸ್ಯೋಕ್ತತ್ವಾತ್, ಕಥಂಜ್ಞಾನಸಹಕೃತಕರ್ಮಣೋ ಮುಕ್ತಿಫಲಮಿತಿಚೇನ್ನ. "ಮಾಹಿಂಸ್ಯಾತ್ಸರ್ವಾ ಭೂತಾನಿ" "ನಮಾಗ್ ನನುಶ್ನೀಯಾತ್" "ನೋಚ್ಛಿಷ್ಟಂಕಸ್ಯಚಿದ್ದದ್ಯಾತ್" ಇತ್ಯಾದಿನಾ ಪಶುಹಿಂಸಾದೇಃ ನಿಷಿದ್ಧತ್ವೇಪಿ, "ಸೋಮೇನೋಚ್ಛಿಷ್ಟಂ" ಯದಗ್ನೀಷೋಮಿಯಂ ಪಶುಮಾಲಭೇತ" ಇತ್ಯಾದಿ ವಿಶೇಷವಾಕ್ಯವಿಹಿತಪಶ್ವಾಲಂಭನಾದಿ ತತ್ತದ್ಧರ್ಮಕರ್ತವ್ಯತ್ವವತ್ "ಸರ್ವಲಿಂಗಂಸ್ಥಾಪಯತಿ" "ಅಮೃತಸ್ಯದೇವಧಾರಣೋಭೂಯಾಸಂ" ಇತ್ಯಾದ್ಯನೇಕವಾಕ್ಯವಿಹಿತಲಿಂಗಧಾರಣಾದಿ ಪತಿಧರ್ಮಾಣಾಂ ಯಾವಜ್ಜೀವಕರ್ತವ್ಯತ್ವವಿಧಾನಾತ್ ನಕರ್ಮಣಾ ಇತ್ಯ

---

ಕ್ತಿಯುಂಟಾಗುವುದಿಲ್ಲವೆಂದು ಹೇಳುತ್ತಿಯಾದ್ದರಿಂದ ಕರ್ಮವನ್ನು ಮುಕ್ತಿಗೆ ನಿಯತಕಾರಣವನ್ನಾಗಿ ಹೇಗೆ ಹೇಳುವದು. ಅಂದರೆ ಶಾಸ್ತ್ರದಲ್ಲಿ ಸಾಮಾನ್ಯ ಶಾಸ್ತ್ರವೆಂದೂ ವಿಶೇಷಶಾಸ್ತ್ರವೆಂದೂ ಎರಡುವಿಧ. ಸಾಮಾನ್ಯಶಾಸ್ತ್ರವು ಎಲ್ಲಾ ಕಡೆಯಲ್ಲಿಯೂ ಪ್ರವರ್ತಿಸುವುದು. ವಿಶೇಷಶಾಸ್ತ್ರವೆಂಬುವದು ವಿಧಾನಮಾಡಲ್ಪಟ್ಟ ಕಾರ್ಯವಂದರಲ್ಲಿಯೇ ವ್ಯವಹರಿಸುವದು. ಇವುಗಳಲ್ಲಿ ವಿಶೇಷಶಾಸ್ತ್ರವು ಸಾಮಾನ್ಯಶಾಸ್ತ್ರವನ್ನು ನಿಷೇಧಿಸುವುದು. ಉದಾಹರಣೆ—ಮಾಹಿಂಸ್ಯಾತ್" (ಪ್ರಾಣಿಯನ್ನು ಕೊಲ್ಲಬಾರದು) ಎಂಬುವ ವಾಕ್ಯವು ಸಾಮಾನ್ಯಶಾಸ್ತ್ರವು. ಪಶುಮಾಲಭೇತ್" (ಯಜ್ಞೀಯ ಪಶುವನ್ನು ಕೊಲ್ಲತಕ್ಕದ್ದು) ಎಂಬುವುದೇ ವಿಶೇಷಶಾಸ್ತ್ರವು. ಇಲ್ಲಿ ಯಾವ ಪ್ರಾಣಿಯನ್ನು ಕೊಲ್ಲಬಾರದೆಂಬ ಸಾಮಾನ್ಯ ಶಾಸ್ತ್ರವನ್ನು ಯಜ್ಞಸಂಬಂಧವಾದ ಪಶುವನ್ನು ಕೊಲ್ಲಬೇಕು ಎಂಬ ವಿಶೇಷಶಾಸ್ತ್ರವು ಸಂಕೋಚನಮಾಡುವದು. ಇದರಂತೆ ನೋಚ್ಛಿಷ್ಟಂ" ಉಚ್ಛಿಷ್ಟವನ್ನು ಯಾರಿಗೂ ಕೊಡಬಾರದೆಂಬ ಸಾಮಾನ್ಯ ಶಾಸ್ತ್ರವು ಉಚ್ಛಿಷ್ಟವನ್ನು ವಿಧಾನ ಮಾಡುವ "ಸೋಮೇನೋಚ್ಛಿಷ್ಟಂ" ಎಂಬ ವಿಶೇಷ ಶಾಸ್ತ್ರದಿಂದ ಬಾಧಿಸಲ್ಪಡುವಂತೆಯೂ, ಕರ್ಮಣಾ" ನಾಸ್ತ್ಯಕೃತಃಕೃತೇನ" ಮೊದಲಾದ ಶ್ರುತಿಗಳು, ಮೋಕ್ಷಕ್ಕೆ ಪ್ರತಿಬಂಧಕವಾದ ಪಶುಕರ್ಮವನ್ನು ನಿಷೇಧಿಸುವುವಲ್ಲದೆ ಸಾಕ್ಷಾತ್ ಮೋಕ್ಷಕಾರಣಗಳಾದ ಭಸ್ಮರುದ್ರಾಕ್ಷ ಲಿಂಗಯಜನ ಲಿಂಗಭಜನ ಲಿಂಗಾರ್ಪಣ ಲಿಂಗಪ್ರಸಾದಗ್ರಹಣ ಲಿಂಗತೀರ್ಥನಿಷೇವಣ ಮೊದಲಾದ ಪತಿಕರ್ಮಗಳನ್ನು

ತ್ರೋಕ್ತ ಕರ್ಮಪದಸ್ಯ ಮೋಕ್ಷಫಲಕ ಪತಿಕರ್ಮಭಿನ್ನ ಇಷ್ಟಾಪೂರ್ತಾದಿ ಪಶು ಕರ್ಮಪರತಯಾವಾ ಜ್ಞಾನಾಸಹಕೃತಕರ್ಮಮಾತ್ರ ಪರತಯಾವಾ ವ್ಯಾಖ್ಯಾನೇ ನಕದಾಚಿದನುಪಪತ್ತಿಃ ||೧೦||

**ಮೂ|| ವಿದ್ಯಾಂಚಾ ವಿದ್ಯಾಂಚ ಯಸ್ತದ್ವೇದೋಭಯಂ ಸಹ| ಅವಿದ್ಯಯಾ ಮೃತ್ಯುಂ ತೀರ್ತ್ವಾ ವಿದ್ಯಯಾ ಮೃತಮಶ್ನುತೇ ||೧೧||**

ಶಾಂ || ವಿದ್ಯಾಕರ್ಮಾನ್ಯತರಸ್ಯ ಪರಾಮೃತತ್ವಾಜನಕತ್ವಮುಕ್ತ್ವಾ ವಿದ್ಯಾಕರ್ಮಸಮುಚ್ಚಯಸ್ಯ ಮೋಕ್ಷಫಲಕತ್ವಮಾಹ ವಿದ್ಯಾಂಚೇತಿ—ವಿದ್ಯಾಂಚ

---

ನಿಷೇಧಮಾಡುವುದಿಲ್ಲವು. ಅಂದರೆ, ಏತಾದೃಶಪತಿ ಕರ್ಮಗಳಿಗೆ ಭಿನ್ನಗಳಾದ ಇಷ್ಟಾಪೂರ್ತಾದಿಕರ್ಮಗಳು ಜ್ಞಾನದೊಡನೆ ಸೇರದಿರುವ ಅಗ್ನಿಷ್ಟೋಮಾದಿ ಪಶುಕರ್ಮಗಳೂ ಮೋಕ್ಷಕ್ಕೆ ಪ್ರತಿಬಂಧಕಗಳೆಂದು ನಿರ್ಣಯಿಸಲ್ಪಡತಕ್ಕದ್ದು. ಹಾಗಿಲ್ಲದೆ ಪತಿಕರ್ಮಕ್ಕೇನೆ ನಿಷೇಧವಂ ಹೇಳುವುದಾದರೆ "ಅಮೃತಸ್ಯ ದೇವ ಧಾರಣೋಭೂಯಾಸಂ" ಅತಪ್ತತನುಃ" ಸರ್ವಲಿಂಗಗ್ಸ್ಥಾಪಯತಿ. ಪಾಣಿಮಂತ್ರಂಪವಿತ್ರಂ" ಸರ್ವಾನನಶಿರೋಗ್ರೀವಃ" ಮೊದಲಾದ ಅನೇಕ ಉಪನಿಷನ್ಮಂತ್ರಗಳಿಗೆ ವೈಯರ್ಥ್ಯವಂ ಹೇಳಬೇಕಾಗುನಕಾರಣ "ನಕರ್ಮಣಾ" ಮೊದಲಾದ ಕರ್ಮನಿಷೇಧಕಪರವಾದ ಶ್ರುತಿಗಳು ಪಶುಕರ್ಮಪರಗಳೆಂದು ಅರ್ಥಸಂಕೋಚ ಮಾಡಿದರೆ ಸಾಮಾನ್ಯಶ್ರುತಿಗಳು ವಿಶೇಷಶ್ರುತಿಗಳು ಸಮನ್ವಯವಾಗುವುದೆಂಬುವುದೆ ವ್ಯಾಖ್ಯಾಕಾರರಸಂಕ್ಷಿಪ್ತ ಆಶಯವು. ||೧೦||

ಅರ್ಥ— ಯಃ—ಯಾವ ಭಕ್ತನು, ವಿದ್ಯಾಂಚ—ಶಿವೈಕ್ಯಜ್ಞಾನವನ್ನು, ಅವಿದ್ಯಾಂಚ-ಪತಿಕರ್ಮವೆನಿಸಿದ ಲಿಂಗಪೂಜಾದಿ ಕರ್ಮವನ್ನು, ತತ್ ಉಭಯಂ-ಇವೆರಡನ್ನೂ, ಸಹ—ಜೊತೆಯಲ್ಲಿ, ವೇದ—ತಿಳಿಯುತ್ತಾನೆಯೊ, ಸಃ—ಅವನು, ಅವಿದ್ಯಯಾ—ಪತಿಕರ್ಮಗಳಿಂದ, ಮೃತ್ಯುಂ—ಮರಣವನ್ನು, ತೀರ್ತ್ವಾ—ದಾಂಟಿ, ವಿದ್ಯಯಾ—ಶಿವೈಕ್ಯಜ್ಞಾನದಿಂದ, ಅಮೃತಂ—ಮುಕ್ತಿಯನ್ನು, ಅಶ್ನುತೆ—ಹೊಂದುತ್ತಾನೆ.

ತಾ|| ಮುಕ್ತಿಗೆ ಜ್ಞಾನ ಕರ್ಮಗಳೆರಡೂ ಕಾರಣವೆಂದು ತಿಳಿದು, ಜ್ಞಾನ ಕರ್ಮಗಳೆರಡನ್ನೂ ನಿರ್ವಹಿಸುತ್ತಿರುವನು ಯಾವನುಂಟೋ ಆತನು



ಬ್ರಹ್ಮಾತ್ಮೈಕ್ಯಜ್ಞಾನಂಚ, ಅವಿದ್ಯಾಂಚ ವಿದ್ಯಾಭಿನ್ನಾಂ ಕ್ರಿಯಾಂಚ ಶಿವಲಿಂಗ ಯಜನಭಜನಾದಿರೂಪಾಂ, ತತ್ ಉಭಯಂ ಸಃ ಮಿಳಿತಂ ಪರಸ್ಪರಂ ಸಾಮಾನಾಧಿಕರಣ್ಯಾಪನ್ನಂ, ಯಃ ಪರಮಪುರುಷಾರ್ಥ ಸಾಕ್ಷಾತ್ಸಾಧನತ್ವೇನ ವೇದ. ಜಾನಾತಿ ಸಃ ಅವಿದ್ಯಯಾ ಶಿವಲಿಂಗಾರ್ಪಿತ ಪತಿಕರ್ಮಣಾ. ಮೃತ್ಯುಂ ಮರಣ ಜನನಾದಿ ಪ್ರವಾಹಮೂಲಂ ಮಲತ್ರಯಂ, ತೀರ್ತ್ವಾ ಅತಿಕ್ರಮ್ಯ ವಿದ್ಯಯಾ. ಸ್ವಸ್ವರೂಪ ಶಿವಜ್ಞಾನೇನ, ಅಮೃತಂ ಶಕ್ತಿವಿಕಾಸರೂಪಮಮೃತತ್ವಂ ಅಶ್ನುತೆ ಪ್ರಾಪ್ನೋತಿ. ಉಕ್ತಂಚ ಶಿವಸೂತ್ರೆ ಚಿತ್ತಮಾತ್ಮೇತಿ. ಏತತ್ಸೂತ್ರ ವ್ಯಾಖ್ಯಾನೇಚ ಆಣವಾದಿ ಮಲನಾಶಕತ್ವಮಂತರ್ಲಿಂಗಧಾರಣಾಪರಪರ್ಯಾಯಧ್ಯಾನಾದೇರುಪಾಯಸ್ಯ. ಇಚ್ಛಾಜ್ಞಾನ ಕ್ರಿಯಾಶಕ್ತೀನಾಮೇವ, ಪರಸ್ಪರಾತ್ರವಿನಾಭೂತಾನಾಂ. ಸ್ವಸ್ವಾತಂತ್ರ್ಯಪ್ರಯುಕ್ತ ಸಂಕೋಚದಶಾಯಾಂ ಮಲತ್ರಯರೂಪತ್ವಾತ್. ಗುರುರುಪಾಯ ಇತಿ ಸೂತ್ರನಿರ್ದಿಷ್ಟ ಮುಖ್ಯೋ

---

ಕರ್ಮದಿಂದ ಜನನ ಮರಣವೆಂಬ ವಿಷವೃಕ್ಷದ ಬುಡವನ್ನೇ ಕತ್ತರಿಸಿ ಆನಂದ ಘನವಾದ ಶಿವತ್ವವನ್ನು ಹೊಂದುವನು. ಇಲ್ಲಿ ಕರ್ಮವು ಮರಣವನ್ನು ನಾಶ ಮಾಡುವುದೆಂದರೆ— ಕರ್ಮದಲ್ಲಿ ಪಶುಕರ್ಮವೆಂತಲೂ, ಪತಿಕರ್ಮವೆಂತಲೂ ಎರಡುವಿಧವೆಂದು ಹಿಂದೆ ಹೇಳಲ್ಪಟ್ಟಿದೆಯಷ್ಟೆ. ಪಶುವಿಶಸನಾದಿ ಪಶುಕರ್ಮಗಳು ಜನನ ಮರಣವನ್ನು ತಪ್ಪಿಸುವುದಿಲ್ಲವು. ಪತಿಕರ್ಮವೆಂದೆನಿಸಿದ ಶಿವಲಿಂಗಾರ್ಚನ ಶಿವಲಿಂಗಧ್ಯಾನ, ಶಿವಲಿಂಗತಪಸ್ಸು ಮೊದಲಾದ ಪಂಚಮಹಾಯಾಗಗಳಿಂದ ಸಂಸಾರ ಕಾರಣವಾದ ಮಲಗಳೆಲ್ಲವು ನಷ್ಟವಾಗುವವು. ಇದೇ ಅಭಿಪ್ರಾಯವು ಶಿವಸೂತ್ರವ್ಯಾಖ್ಯಾಕಾರರಾದ ಕ್ಷೇಮರಾಜರಿಂದಲೂ ಹೇಳಲ್ಪಟ್ಟಿರುವುದು.

ಇದಲ್ಲದೆ ಪರಮಾತ್ಮನ ಅವಿನಾಭಾವಸಂಬಂಧಗಳಾದ ಇಚ್ಛಾ ಜ್ಞಾನ ಕ್ರಿಯಾಶಕ್ತಿಗಳೇ ಸಂಕೋಚ ಭಾವವನ್ನು ಹೊಂದಿ ಸ್ವತಂತ್ರನಾದ ಆ ಪರಮಾತ್ಮನ ಸಂಕಲ್ಪ ವಿಶೇಷದಿಂದ ಆಣವಾದಿ ಮೂರು ಮಲಗಳಾಗಿ ಪರಿಣಮಿಸಿ, ಆತ್ಮರನ್ನು ಆವರಿಸಿ, ದುಃಖಮಿಶ್ರರನ್ನಾಗಿ ಮಾಡಿರುವುವು. ಆ ದುಃಖವನ್ನು ಪರಿಹರಿಸಲು ಗುರುವೇ ಮುಖ್ಯ ಉಪಾಯವೆಂಬ ಶಿವಸೂತ್ರದಲ್ಲಿ ಹೇಳಿರುವುದರಿಂದ ಗುರುಗಳಿಗೆ ಶರಣಾಗತನಾಗಿ ಗುರುಕಟಾಕ್ಷಕ್ಕೆ ಪಾತ್ರನಾದಬಳಿಕ, ಆ ಗುರುವು ಶರಣಾಗತಿಯನ್ನು ಹೊಂದಿದ ಶಿಷ್ಯರ ಸ್ಥೂಲಸೂಕ್ಷ್ಮಕಾರಣ ಶರೀರಗಳೆಂಬ ಕರ್ಪೂರವನ್ನು ಶಿವಲಿಂಗಾಗ್ನಿಯ ತ್ರಿವಿಧ ದೀಕ್ಷೆಗಳೆಂಬ ಧಗಧಗಿಸುವ

ಪಾಯಭೂತ ಗುರುಕೃತ ಲಿಂಗಾಂಗ ಸಂಯೋಗಾನಂತರಂ ಶಿಖಿಕರ್ಪೂರಯೋಗ
ನ್ಯಾಯೇನ ಮಲತ್ರಯಸ್ಯನಿಸ್ಸರಣಾತ್. ಪರಪ್ರಮಾತೃಶಕ್ತಿವಿಕಾಸ ಏವ
ಜಾಯತೆ. ತದಾ ತದೇತದಂಗಸ್ಥಲಂ ಸರ್ವಜ್ಞತ್ವಾದಿ ಷಡಂಗಲಿಂಗಸ್ಥಲಮೇವ
ಜಾಯತೆ ಇತ್ಯರ್ಥಃ. ಉಕ್ತಂಚ ಶಿವಲಿಂಗಾರ್ಚನಸ್ಯ ಕಾಮಾದಿಮಲನಾಶಕ
ತ್ವಂ ಶ್ರೀಮದ್ಧರದತ್ತ ಭಗವತ್ಪಾದಾಚಾರ್ಯೇಣಾಪಿ. „ಪತ್ನ್ಯಾಸಮಂಸಹಗಣೈಃ
ಸಹಪಾಸುತಾಭ್ಯಾಂ ಸಾರ್ಧಂ ತದಾಪರಿಷದಾವಿಷಮೇಕ್ಷಣಂತ್ವಾಂ | ಆದ್ಯಷ್ಟ
ಮಿಾತಿಥಿ ನಿಶಾ ಮುಖಮರ್ಚಯಂತಃ ಪಾಪಂ ತರಂತ್ಯಪಜಯಂತಿ ಮಹೇಶ
ಮೃತ್ಯುಂ" ಇತ್ಯಾದಿನಾ.

ನನೂತ್ಪತ್ತ್ಯಾಪ್ತಿವಿಕೃತಿ ಸಂಸ್ಕೃತೀನಾಂ ಕರ್ಮಫಲತ್ವಾತ್. ಅವಿದ್ಯಾ
ನಿವೃತ್ತಿಫಲತ್ವಾಚ್ಚಾವಿದ್ಯಾಯಾಃ ಕಥಮನಯೋಃ ಸಾಮಾನಾಧಿಕರಣ್ಯಂ, ನಹಿ
ಶುಕ್ತಿಕಾಶಕಲಂ ಸಾಕಲ್ಯೇನಾಕಲಯತಃ ಕಲಧೌತವಿಭ್ರಮನಿವೃತ್ತಿಃ. ಸ್ನಾನಾ

---

ಜ್ವಾಲೆಗಳಿಂದ ಸುಟ್ಟು, ತ್ರಿವಿಧ ಮಲಗಳನ್ನು ಒತ್ತರಿಸಿ, ತತ್ವಮಸ್ಯಾದಿ ಮಹಾ
ವಾಕ್ಯಗಳನ್ನು ಉಪದೇಶಮಾಡುವನು. ಆಗ ಶಿಷ್ಯನು ಗುರೂಪದೇಶಾನುಸಾರ
ವಾಗಿ ಶಿವೋಹಂ ಭಾವನೆಂಬ ಅಹಂಗ್ರಹೋಪಾಸನೆಯಿಂದ ಶಿವಲಿಂಗಾರ್ಚ
ನೆಯಂ ಮಾಡುತ್ತ, ನಿರ್ಮಲಾತ್ಮನಾಗಿ ತನ್ನ ಯಥಾರ್ಥ ಸ್ವರೂಪವನ್ನು ತಿಳಿ
ದು, ಜನನ ಮರಣ ರೂಪವಾದ ಪ್ರವಾಹ ವೇಗಕ್ಕೆ ದೂರನಾಗಿ ತಾನೇ ಶಿವ
ಸ್ವರೂಪನಾಗುವನು. ಈ ವಿಷಯದಲ್ಲಿ ಹರದತ್ತರೆಂಬ ಮಹಾ ಕವಿಗಳು ಸಹ
„ಪತ್ನ್ಯಾಸಮಂ" ಎಂಬ ಶ್ಲೋಕದಲ್ಲಿಯೂ ಸ್ಪಷ್ಟಮಾಡಿರುವರು.

ಪೂರ್ವಮಿಾಮಾಂಸೆಯಲ್ಲಿ ಉತ್ಪತ್ತಿ, ಆಪ್ತಿ, ವಿಕೃತಿ, ಸಂಸ್ಕೃತಿ ಎಂದು
ಕರ್ಮಫಲವು ನಾಲ್ಕುವಿಧವಾಗಿ ವಿಭಾಗಿಸಲ್ಪಟ್ಟಿರುವುದು. ವೇದಾಂತದಲ್ಲಿ ಜ್ಞಾ
ನಕ್ಕೆ ಅವಿದ್ಯಾನಿವೃತ್ತಿಯೇ ಫಲವೆಂದು ಹೇಳಲ್ಪಟ್ಟಿರುವುದು. ಆದುದರಿಂದ ಕರ್ಮ
ಫಲವೇ ಬೇರೆ, ಜ್ಞಾನದ ಫಲವೇ ಬೇರೆ ಎಂದು ಸಿದ್ಧವಾಗುತ್ತಿರಲು, ಜ್ಞಾನ
ಕರ್ಮಗಳೆರಡೂ ಒಂದೇಕಾಲದಲ್ಲಿ ಒಂದುಕಡೆ ಕೂಡಿರುವುದು ಹೇಗೆ? ಇದಲ್ಲದೆ
„ತಮೇವಂವಿದಿತ್ವಾ" ನಕರ್ಮಣಾ" ಏತಾವದರೆಖಲ್ವಮೃತತ್ವಂ" ಮೊದಲಾದ
ಶ್ರುತಿಗಳಿಂದಲೂ, ಕರ್ಮಣಾಬಧ್ಯತೆಜಂತುಃ" ಮೊದಲಾದ ಸ್ಮೃತಿಗಳಿಂದಲೂ,
ಮೋಕ್ಷವೆಂಬುವದು ಜ್ಞಾನದ ಫಲವೇ ಹೊರತು ಕರ್ಮದ ಫಲವಲ್ಲವು. ಮೋ
ಕ್ಷವೆಂದರೆ ಅವಿದ್ಯಾನಿವೃತ್ತಿ ಪೂರ್ವಕ ಪರಮಾನಂದ ಪ್ರಾಪ್ತಿಯೆಂದು ಹೇಳಿದ



ಚಮನ ಕರ್ಮಾಪೇಕ್ಷಯಾವಿಲಂಬತೆ. ತಸ್ಮಾತ್ ಬ್ರಹ್ಮಾತ್ಮ ಸಾಕ್ಷಾತ್ಕಾರ
ಸ್ಯೈವ ತದವಿದ್ಯಾನಿವೃತ್ತಿಫಲಕತ್ವಮಿತ್ಯಭ್ಯುಪೇಯಂ. ಶ್ರೂಯತೇಹಿ„ತಮೇವಂ
ವಿದಿತ್ವಾತಿ ಮೃತ್ಯುಮೇತಿ „ನಾನ್ಯಃ ಪಂಥಾವಿದ್ಯತೆಯನಾಯ." „ನಕರ್ಮಣಾ
ನಪ್ರಜಯಾಧನೇನ." „ನಾಸ್ತ್ಯಕೃತಃಕೃತೇನ" ಏತಾವದರೆಖಲ್ವಮೃತತ್ವಂ. ಇ
ತ್ಯಾದಿಸ್ಮರ್ಯತೇಚ „ಜ್ಞಾನಾದೇವತುಕೈವಲ್ಯಂ ಪ್ರಾಪ್ಯತೆ ಯೇನಮುಚ್ಯತೆ |
ತಸ್ಮಾತ್ಕರ್ಮನಕುರ್ವಂತಿ ಯತಯಃ ಪಾರದರ್ಶಿನಃ" ಇತಿ. ನನ್ವೇತೇಷಾಂವಚ
ನಾನಾಂ ಕೇವಲಾನಾಮೇವ ಸ್ಥೂಲಕರ್ಮಣಾಂ ಕೈವಲ್ಯಸಾಧನತ್ವನಿರಾಕರ
ಣಪರತ್ವಾತ್ ಸಮುಚ್ಚಿತಾನಾಮುಪಪನ್ನತ್ವಾತ್ ತತ್ಸಾಧನಭಾವಸ್ಯ, ಅನ್ಯಥಾ
„ಅಂಧಂ ತಮಃ ಪ್ರವಿಶಂತಿ. ಇತ್ಯಾದ್ಯುಕ್ತೈರೈಕ್ಯೈಕ ನಿಂದಾಪುರಸ್ಸರಮ್.
ವಿದ್ಯಾಂಚಾ ವಿದ್ಯಾಂಚ ಇತ್ಯಾದಿನಾ ಜ್ಞಾನಕರ್ಮಣೋಃ ಸಮುಚ್ಚಿತಯೋಃ
ಮೋಕ್ಷಸಾಧನತ್ವ ಪ್ರತಿಪಾದನಂ ನಸ್ಯಾತ್. ತಥಾಚ ಸಂಕುಚಿತ ಶಕ್ತಿತ್ರಯ

---

ಮೇಲೆ ಅವಿದ್ಯಾಶಬ್ದವಾಚ್ಯವಾದ ಕರ್ಮಗಳಿಂದೇನೂ ಪ್ರಯೋಜನವಿಲ್ಲವಾದು
ದರಿಂದ ಕರ್ಮವು ಮುಕ್ತಿಕಾರಣವಲ್ಲವು. ಕಪ್ಪೇಚಿಪ್ಪನ್ನು ನೋಡಿ ಬೆಳ್ಳಿಯೆಂದು
ಭ್ರಮಿಸಿ ನಂತರ ಇದು ಕಪ್ಪೆಚಿಪ್ಪೇಹೊರತು ಬೆಳ್ಳಿಯಲ್ಲವು ಎಂದು ತಿಳಿದ ಕ್ಷಣದ
ಲ್ಲಿಯೇ ಇದು ಬೆಳ್ಳಿಯೆಂಬ ಅವಿದ್ಯಾನಿವೃತ್ತಿಯಾಗುವದು. ಅವಿದ್ಯಾನಿವೃತ್ತಿಗಾಗಿ
ಯಾವುನೂ ಯಾವ ಸ್ನಾನ ಆಚಮನಾದಿ ಕರ್ಮವನ್ನು ಮಾಡಬೇಕಿಲ್ಲವು.
ಅನರ್ಥನಿವೃತ್ತಿರೂಪವಾದ ಮೋಕ್ಷಕ್ಕೆ ಕರ್ಮದ ಉಪಯೋಗವೇ ಅವಶ್ಯವಿಲ್ಲದ
ಕಾರಣ ಮೋಕ್ಷವೆಂಬುವದು ಜ್ಞಾನವಂದರ ಫಲವೇ ಹೊರತು ಕರ್ಮಫಲವ
ಲ್ಲವು. ಎಂದು ಸಿದ್ಧಾಂತವಾಗಿರಲು, ಕರ್ಮಜ್ಞಾನಗಳ ಸಮುಸಮುಚ್ಚಯವೇ
ಮೋಕ್ಷಕಾರಣವೆಂದು ಹೇಳುವುದಕ್ಕೆ ಹೇಗೆ ಆದೀತು? ಅಂದರೆ

ಕರ್ಮದಿಂದ ಮುಕ್ತಿಯು ಲಭಿಸುವುದಿಲ್ಲವೆಂದು ಹೇಳುವ ಶ್ರುತಿವಾಕ್ಯಗ
ಳೆಲ್ಲವೂ ಜ್ಯೋತಿಷ್ಟೋಮಾದಿ ಸ್ಥೂಲಕರ್ಮಗಳನ್ನು ನಿಷೇಧಿಸುವುವೇ ಹೊರತು
ಸತಿಕರ್ಮಗಳನ್ನು ನಿಷೇಧ ಮಾಡುವುದಕ್ಕೆ ಹೊರಟ ವಾಕ್ಯಗಳಲ್ಲವು. ಹಾಗೆ
ಸಕಲ ಕರ್ಮಗಳನ್ನು ನಿಷೇಧಿಸುವುವೆಂದರೆ „ಅಂಧಂತಮಃಪ್ರವಿಶಂತಿ" ಎಂದು
ಹಿಂದೆ ಹೇಳಿದ ಮಂತ್ರದಲ್ಲಿ ಜ್ಞಾನ ಕರ್ಮಗಳೆರಡರಲ್ಲಿ ಒಂದನ್ನು ಬಿಟ್ಟು ಒಂದ
ನ್ನು ಆಚರಿಸುವವರಿಗೆ ದೋಷವು ಹೇಳಲ್ಪಟ್ಟಿರುವುದರಿಂದಲೂ, ವಿದ್ಯಾಂಚಾ
ವಿದ್ಯಾಂಚ" ಎಂಬ ಮಂತ್ರದಲ್ಲಿ ಜ್ಞಾನಕರ್ಮಗಳ ಸಮುಸಮುಚ್ಚಯವೇ ಮು

ರೂಪಮಲತ್ರಯ ನಿವೃತ್ತಿಃ. ಶಕ್ತಿವಿಕಾಸರೂಪ ಶಿವತ್ವಪ್ರಾಪ್ತಿರ್ಮೋಕ್ಷಃ. ತತ್ರ ಮೃತ್ಯುಶಬ್ದಿತ ಕಾರ್ಮಾದಿ ಮಲನಾಶಫಲಕತ್ವಮವಿದ್ಯಾಶಬ್ದಿತಕರ್ಮಣಾಂ ಹಾರ್ದಾಕಾಶ ಮಧ್ಯಲಿಂಗಧಾರಣಾದೀನಾಂ ಸೂಕ್ಷ್ಮಾಣಾಂ, ವಿದ್ಯಾಯಾಸ್ತು ತಿರೋಹಿತ ಸ್ವಶಕ್ತೇರಾಚ್ಛಾದನ ವಿಗಳನಫಲಕತ್ವಂ. ವಾಯೋಃ ಸೂರ್ಯಾಚ್ಛಾದನ ಮೇಘ ನಿಸ್ಸರಣ ಫಲಕತ್ವವತ್. ಯತ್ತು ದೇವತಾಜ್ಞಾನಂ ವಿದ್ಯಾಶಬ್ದೇನವಿವಕ್ಷಿತಂ ತಸ್ಯಕರ್ಮಣಾ ಸಮುಚ್ಚಯೋಽನೇನವಾಕ್ಯೇನ ಕಥ್ಯತೆ ಇತಿ ವದಂತಿ. ತದತ್ಯಯುಕ್ತಂ. ಈಶಾವಾಸ್ಯಮಿದಗ್ ಸರ್ವಮಿತ್ಯುಪಕ್ರಮೆ ಮಹೇಶ್ವರಸ್ಯೈವ ಪ್ರಕ್ರಾಂತತ್ವಾತ್. ತಸ್ಯ ಮಾನಸಕರ್ಮತ್ವಾಚ್ಚ. ಅವಿದ್ಯಯಾ ವಿದ್ಯಯೇತಿ ಪೃಥಗುಪಾದಾನಾಚ್ಚ ವಿದ್ಯಾಶಬ್ದಸ್ಯ ಉಪಾಸನಾಪರಕತ್ವೆ ತನ್ನಸ್ಯಾತ್. ಶ್ರುತಿಸ್ಸ್ಮೃತಿರಪಿ ಸಮುಚ್ಚಯಂ ಪ್ರತಿಪಾದಯತಿ. ‹‹ತೇನೈತಿಬ್ರಹ್ಮವಿತ್ ಪುಣ್ಯಕೃತ್ ತೈಜಸಶ್ಚ ಸತ್ಯೇನ ಲಭ್ಯಸ್ತಪಸಾಹ್ಯೇಷಆತ್ಮಾ ಸಮ್ಯಗ್‌ಜ್ಞಾನೇನ

---

ಕ್ತಿಗೆ ಕಾರಣವೆಂದು ಹೇಳಿರುವುದು ಯುಕ್ತವಾಗದೆ ಹೋಗಬೇಕಾಗುವದು. ಆದುದರಿಂದ ಜ್ಯೋತಿಷ್ಟೋಮಾದಿ ಪಶುಕರ್ಮಗಳು ಮೋಕ್ಷಕ್ಕೆ ಕಾರಣವಾಗದಿದ್ದರೂ ಪತಿಕರ್ಮವೂ ಮೋಕ್ಷಕ್ಕೆ ನಿಯತಕಾರಣವೇ ಆಗಿರಲು, ಜ್ಞಾನಕರ್ಮಸಮಸಮುಚ್ಚಯವೇ ಮುಕ್ತಿಗೆ ಕಾರಣವೆಂದು ವೀರಶೈವಸಿದ್ಧಾಂತಮುಕ್ತಂ.

ಇಲ್ಲಿ ಕೆಲ ಅನ್ಯಮತಾಚಾರ್ಯರು ಈ ಮಂತ್ರದಲ್ಲಿರುವ ವಿದ್ಯಾ ಎಂಬ ಶಬ್ದಕ್ಕೆ ಯಾವುದಾದರೊಂದು ದೇವತೋಪಾಸನೆ ಎಂದು ಅರ್ಥಮಾಡಿಕೊಂಡು ಆ ದೇವತೋಪಾಸನೆಯೊಡನೆ ಜ್ಯೋತಿಷ್ಟೋಮಾದಿ ಕರ್ಮವನ್ನು ಸಮುಚ್ಚಯವಾಗಿ ಆಚರಿಸಬೇಕು ಎಂದು ಹೇಳುತ್ತಾರೆ. ಈ ಅರ್ಥವು ಇಲ್ಲಿ ಸಂಗತವಾಗುವದಿಲ್ಲವು. ಯಾಕಂದರೆ—ಈಶಾವಾಸ್ಯಮಿದಗ್‌ಸರ್ವಂ›› ಎಂದು ಈ ಉಪನಿಷತ್ತಿನ ಉಪಕ್ರಮದಲ್ಲಿ ಪಂಚದೇವತೆಗಳೆಂದು ಹೇಳಲ್ಪಟ್ಟಿಲ್ಲವು. ಕೇವಲ ಪರಮೇಶ್ವರನೆಂದು ಉಪಕ್ರಮಿಸಲ್ಪಟ್ಟಿರುವುದು. ಹೀಗಿರುವಾಗ ವಿದ್ಯಾಂಚಾವಿದ್ಯಾಂಚ›› ಎಂಬ ಈ ಮಂತ್ರಕ್ಕೆ ಯಾವುದಾದರೊಂದು ದೇವತೋಪಾಸನೆಯೆಂದು ಅರ್ಥಮಾಡುವದು ಉಪಕ್ರಮ ವಿರೋಧವಾಗುವುದು.

ಇಲ್ಲಿ ವಿದ್ಯಾ ಶಬ್ದಕ್ಕೆ ಉಪಾಸನೆಯೆಂದರ್ಥ ಮಾಡಿದರೆ ಉಪಾಸನೆಯೆಂಬುವದು ಮಾನಸಿಕವಾದ ಒಂದು ಕರ್ಮವೇ ಆಗುವುದರಿಂದ ಇದೂ ಅವಿದ್ಯೆ



ಬ್ರಹ್ಮಚರ್ಯೇಣನಿತ್ಯಂ›› ಇತಿ. ‹‹ತಪೋವಿದ್ಯಾಚವಿಪ್ರಸ್ಯ ನಿಶ್ರೇಯಸಕರಂಪರಂ | ತಪಸಾಕಲ್ಮಷಂಹಂತಿ ವಿದ್ಯಯಾಽಮೃತಮಶ್ನುತೆ || ತತ್ಪ್ರಾಪ್ತಿಹೇತುರ್ಜ್ಞಾನಂಚ ಕರ್ಮಚೋಕ್ತಂ ಮಹಾಮುನೆ | ಯಥಾನ್ನಂ ಮಧುಸಂಯುಕ್ತಂ ಮಧುಚಾನ್ನೇನಸಂಯುತಂ | ಏವಂತಪಶ್ಚ ವಿದ್ಯಾಚ ಸಂಯುಕ್ತಂ ಭೇಷಜಂಮಹತ್|| ಇತಿ ತಸ್ಮಾತ್ ಕರ್ಮನಿಂದಾ ಪ್ರತಿಪಾದಕವಾಕ್ಯಾನಾಂ ಕೇವಲ ಜ್ಯೋತಿಷ್ಟೋಮಾದಿ ಸ್ಥೂಲಕರ್ಮವಿಷಯತ್ವಮೇವೇತಿ ನಿಶ್ಚೀಯತೆ. ನಹಿಜ್ಞಾನಸಹಕೃತ ಲಿಂಗಧಾರಣಾದಿ ಪತಿಕರ್ಮಜನ್ಯಮೋಕ್ಷಸ್ಯ ಭವನದೋಹನ ಅಭಿಷವಪ್ರೋಕ್ಷಣೈಃ ಪಿಂಡಪಯಃ ಸೋಮವ್ರಿಹೀಣಾಮಿವ ಉತ್ಪಾದ್ಯಾಪ್ಯವಿಕಾರ್ಯಸಂಸ್ಕಾರ್ಯತ್ವಂ ಸಂಭವತಿ. ಉತ್ಪತ್ಯಾಪ್ತಿ ವಿಕೃತಿ ಸಂಸ್ಕೃತಯಸ್ತು ಜ್ಞಾನಾಸಹಕೃತ ಪಶುಕರ್ಮಣಾಂ ಫಲಾನಿಸಂತು. ಜ್ಞಾನವಿಶಿಷ್ಟ ಲಿಂಗಧಾರಣಾದಿ ಪತಿಕರ್ಮಣಾಂತು ಪುನರಾವೃತ್ತಿರಹಿತ ಸರ್ವಜ್ಞತ್ವಾದಿ ಷಡಂಗ ಶಿವತ್ವಪ್ರಾಪ್ತಿರೇವ

---

ಯೇ ಆಗುವುದು. ಆಗ ಮಂತ್ರದಲ್ಲಿ ಅವಿದ್ಯಯಾ ವಿದ್ಯಯಾ ಎಂದು ಬೇರೆ ಬೇರೆ ಹೇಳುವುದಕ್ಕೆ ಪ್ರಯೋಜನವೇ ಇಲ್ಲದಂತಾಗುವದು. ಈ ಆಚಾರ್ಯರ ಅಭಿಪ್ರಾಯವೇ ಈ ಮಂತ್ರಾಭಿಪ್ರಾಯವಾಗಿದ್ದರೆ ವಿದ್ಯಯಾ ಅವಿದ್ಯಯಾ ಎಂದು ಬೇರೆ ಬೇರೆ ಹೇಳುತ್ತಿರಲೇ ಇಲ್ಲವಾದಪ್ರಯುಕ್ತ, ಈ ಮಂತ್ರದಲ್ಲಿರುವ ವಿದ್ಯಾ ಅವಿದ್ಯಾ ಶಬ್ದಗಳು ಕರ್ಮಜ್ಞಾನಪರವಾದವುಗಳೆಂದು ಹೇಳುವುದೇ ಸೂಕ್ತವಾಗಿದೆ.

ಮತ್ತು ಜ್ಞಾನ ಕರ್ಮ ಸಮಸಮುಚ್ಚಯದಿಂದಲೇ ಮುಕ್ತಿಯು ಲಭಿಸುವುದು ಎಂಬ ವಿಷಯದಲ್ಲಿ ‹‹ತೇನೈತಿಬ್ರಹ್ಮವಿತ್ ಪುಣ್ಯಕೃತ್›› ತಪೋವಿದ್ಯಾಚ› ಮೊದಲಾದ ಶ್ರುತಿಗಳೂ ಪ್ರಮಾಣಗಳಾದ್ದರಿಂದ ಕರ್ಮನಿಷೇಧಕ ಶ್ರುತಿಗಳಿಗೆ ಅರ್ಥ ಸಂಕೋಚವನ್ನು ಮಾಡಬೇಕು. ಭವನಾದಿ ಕರ್ಮದಿಂದ ಪಿಂಡಾದಿಗಳಿಗೆ ಉತ್ಪಾದ್ಯತ್ವಾದಿಗಳು ಬಂದರೂ ಪತಿಕರ್ಮದಿಂದ ಮೋಕ್ಷಕ್ಕೆ ಉತ್ಪಾದ್ಯತ್ವಾದಿಗಳು ಸಂಭವಿಸುವುದಿಲ್ಲ. ಆದರೆ ‹‹ಅಮೃತಸ್ಯ ದೇವಧಾರಣೋ ಭೂಯಾಸಂ›› ಅತಪ್ತತನುರ್ನತದಾಮೋಽಶ್ನುತೆ›› ಇತ್ಯಾದಿ ಮಂತ್ರಗಳಿಂದ ಮೋಕ್ಷಾವಿರ್ಭಾವವಾಗುವುದೆಂದು ನಿಶ್ಚಯಿಸುತ್ತೇವೆಯಾದಕಾರಣ, ‹‹ವಿವಿದಿಷಂತಿಯಜ್ಞೇನ›› ಮೊದಲಾದ ವಾಕ್ಯಗಳಿಂದ ಹೇಳಲ್ಪಟ್ಟ ಯಜ್ಞಾದಿ ಕರ್ಮಗಳು ಜ್ಞಾನಕ್ಕೆ ಸಾಧನಗಳೇ ಹೊರತು ಮೋಕ್ಷಕ್ಕೆ ಸಾಧನಗಳಲ್ಲವೆಂದು ಹೇಳುವುದೂ

ಫಲಮಿತಿ. ‚‚ಅಮೃತಸ್ಯ ದೇವಧಾರಣೋಭೂಯಾಸಂ'' ಅತಸ್ತತಸುರ್ನತದಾ ಮೋಽಶ್ನುತೇ'' ಇತ್ಯಾದಿ ಶ್ರುತಿಭಿರ್ನಿಶ್ಚೀಯತೇ. ಏತೇನ ‚‚ತಮೇತಂ ವೇದಾನು ವಚನೇನ ಬ್ರಾಹ್ಮಣಾ ವಿವಿದಿಷಂತಿಯಜ್ಞೇನದಾನೇನ'' ಇತಿ ಶ್ರುತ್ಯಾಯಜ್ಞಾ ದಿಕರಣಕತ್ವಸ್ಯ ಜ್ಞಾನೇಽವಗಮಾತ್. ಕರ್ಮಣಾಂ ಜ್ಞಾನಸಾಧನತ್ವಮೇವ ನತುಮೋಕ್ಷಸಾಧನತ್ವಮಿತ್ಯುಕ್ತಮಪಿ ಪ್ರತ್ಯುಕ್ತಂ. ಅತ್ರಯಜ್ಞಪದಸ್ಯ ಬಾಹ್ಯ ಯಜ್ಞಪರತ್ವೇನ ವ್ಯಾಖ್ಯಾನಾತ್. ಅನ್ಯಥಾ'' ಸತ್ಯೇನಲಭ್ಯಸ್ತಪಸಾಹ್ಯೇಷ ಆತ್ಮಾ ಸಮ್ಯಗ್ ಜ್ಞಾನೇನ ಬ್ರಹ್ಮಚರ್ಯೇಣನಿತ್ಯಂ'' ಇತ್ಯತ್ರ ತೃತೀಯಾಂತ ತಪಃ ಶಬ್ದವಾಚ್ಯಾಭ್ಯಂತರ ಧ್ಯಾನಧಾರಣಾದಿಕರ್ಮಣಾ ಶಿವತ್ವಪ್ರಾಪ್ತಿರ್ನ ಸ್ಯಾತ್. ನಸ್ಯಾಚ್ಚ ಕೇವಲವಿದ್ಯಾನಿಂದಾ. ನಚನಿಂದಾಯಾಃ ದೇವತಾಜ್ಞಾನ ವಿಷಯತ್ವೇಽಪಿ ಸಂಭವಾತ್. ಯಜ್ಞೇನೇತಿ ತೃತೀಯಾಂತಶ್ರುತೇಃ ಪ್ರಕ್ರಮಾದ್ಬ ಲೀಯಸ್ತ್ವಾತ್. ತಸ್ಯ ಬಾಧ್ಯತ್ವಾತ್. ವಿದ್ಯಾಂಚಾ ವಿದ್ಯಾಂಚೇತಿಶ್ರುತೇಃ ಕ್ರಮ. ಸಮುಚ್ಚಯ ವಿಷಯತ್ವೇನಾ ಪ್ಯುಪಪತ್ತಿಸಂಭವಾತ್. ಅವಿದ್ಯಯಾ

---

ಕೂಡ ವಾರಣಮಾಡಲ್ಪಟ್ಟಂತಾಯಿತು. ಯಾಕಂದರೆ ವಿವಿದಿಷಂತಿಯಜ್ಞೇನ'' ಎಂಬ ಮಂತ್ರದಲ್ಲಿರುವ ಯಜ್ಞಪದಕ್ಕೆ ಬಾಹ್ಯಯಜ್ಞವೆಂದು ಅರ್ಥಮಾಡುತ್ತೇವೆ. ಹೀಗೆ ಅರ್ಥಮಾಡದಿದ್ದರೆ, ಸತ್ಯೇನಲಭ್ಯಸ್ತಪಸಾಹ್ಯೇಷಆತ್ಮಾ'' ಎಂಬಲ್ಲಿ ತೃತೀಯಾಂತವಾದ ತಪೋರೂಪವಾದ ಅಂತರ್ಲಿಂಗಧಾರಣರೂಪ ಪತಿಕರ್ಮ ದಿಂದ ಮೋಕ್ಷಪ್ರಾಪ್ತವಾಗುವುದೆಂದು ಹೇಳುವುದು ಸಂಗತವಾಗಲಾರದು.

ಪೂರ್ವಪಕ್ಷಿಯು ಸಮುಸಮುಚ್ಚಯವಾದಿಯಾದ ವೀರಶೈವನು ತೋರಿ ಸಿದ ಸಕಲ ದೋಷವನ್ನೂ ವಾರಣಮಾಡಿ ತಮ್ಮ ಕ್ರಮ ಸಮುಚ್ಚಯವನ್ನು ಸಾಧಿಸುವನು. ವಿದ್ಯಾ ಶಬ್ದಕ್ಕೆ ದೇವತೋಪಾಸನೆಯೆಂಬ ಅರ್ಥವನ್ನು ಮಾಡಿದ ಮಾತ್ರದಿಂದ ಹಿಂದಣ ಅಂಧಂತಮಃ ಪ್ರವಿಶಂತಿ'' ಎಂಬ ಮಂತ್ರದಲ್ಲಿ ಹೇಳಲ್ಪಟ್ಟ ದೋಷವು ಅಸಂಗತವಾಗಲಾರದು. ಯಜ್ಞೇನ ವಿವಿದಿಷಂತಿ'' ಎಂಬುವ ತೃತೀ ಯಾಂತವಾದ ಶ್ರುತಿಯು ಉಪಕ್ರಮವಾಕ್ಯಕ್ಕೆ ಬಾಧೆಯನ್ನುಂಟುಮಾಡುವುದ ರಿಂದ, ವಿದ್ಯಾಂಚಾವಿದ್ಯಾಂಚ'' ಎಂಬ ಶ್ರುತಿಯನ್ನು ಕ್ರಮಸಮುಚ್ಚಯಪರ ವಾಗಿ ಅರ್ಥಮಾಡಿದರೂ ಯುಕ್ತವಾಗುವುದಾದ ಕಾರಣ, ಅವಿದ್ಯಯಾ ಮೃ ತ್ಯುಂತೀರ್ತ್ವಾ ವಿದ್ಯಯಾ ಮೃತಮಶ್ನುತೇ'' ಎಂದು ಪೂರ್ವಾಪರತ್ವವನ್ನು ಹೇಳುವುದರಿಂದಲೂ, ಕ್ರಮಸಮುಚ್ಚಯವೇ ಮಂತ್ರದ ಆಶಯವೆಂದು ಕಂಡು



ಮೃತ್ಯುಂತೀರ್ತ್ವಾ ವಿದ್ಯಯಾಮೃತಮಶ್ನುತೇ. ಇತಿ ಪೌರ್ವಾಪರ್ಯಾಭಿಧಾನಾ ಚ್ಚೇತಿವಾಚ್ಯಂ. ತಪಸೇತಿ ತೃತೀಯಾಂತಶ್ರುತೇರಪಿ ಸತ್ವಾತ್ ಸಮುಸಮುಚ್ಚಯ ಪಕ್ಷೇ ಉಪಕ್ರಮಾವಿರೋಧಾತ್.

‚‚ಯಸ್ತದ್ವೇದೋಭಯಗ್ ಸಹ'' ಇತ್ಯನೇನ ಜ್ಞಾನಕರ್ಮಣೋಸ್ಸಹಭಾ ವಸ್ಯಶ್ರುತತ್ವಾತ್ ಅವಿದ್ಯಯಾ ಮೃತ್ಯುಂತೀರ್ತ್ವಾ ವಿದ್ಯಯಾಮೃತಮಶ್ನುತೇ. ಇತ್ಯಭಿಧಾನಂತು ಲಿಂಗತ್ರಯಧಾರಣಾಪಸ್ಯತ ಮಲತ್ರಯಮಂತರಾ ಶಿವತ್ವಪ್ರಾ ಪ್ತಿರೂಪಮೋಕ್ಷೋ ನಭವತೀತಿ ಪ್ರದರ್ಶನಾರ್ಥಮಿತಿಬೋಧ್ಯಂ. ವೇದಾಂತ ಸಾರೋಪನಿಷದಿ'' ಹೃದಬ್ಜಮಧ್ಯೇಲಿಂಗಂಧೃತ್ವಾ ಜ್ಯೋತಿಷಿ ಸಂವಿಶಂತಿ, ಆತ್ಮಾ ಶ್ರಮಸ್ಥಾಃಪರಿಮುಚ್ಯಂತಿ ಸರ್ವೇಲಿಂಗಾಂಗಶೋಭಾ ಮೋಕ್ಷಮಾರ್ಗೈಕನಿ ಷ್ಠಾಃ'' ಕಿಂಚಾಸ್ಮಿನ್ನೇವೋಪನಿಷದಿ'' ಶಿವಪ್ರಸಾದಾತ್ ಪರಿಮುಚ್ಯಂತಿಸರ್ವೇ.

---

ಬರುವುದರಿಂದಲೂ, ಮೋಕ್ಷವು ಕೇವಲ ಜ್ಞಾನದ ಫಲವೇ ಅಲ್ಲದೆ ಕರ್ಮ ಜ್ಞಾನಗಳ ಸಮುಸಮುಚ್ಚಯದ ಫಲವಲ್ಲವು ಎಂಬುವುದೇ ಈ ಪೂರ್ವಪಕ್ಷಿಯ ಅಭಿಪ್ರಾಯವು.

ಈ ಪೂರ್ವಪಕ್ಷದ ಮೇಲೆ ಶಾಂಕರೀಕಾರನು ಸಮಾಧಾನವನ್ನು ಹೇಳು ವುದೇನಂದರೆ—ಯಜ್ಞೇನ ಎಂಬುವ ತೃತೀಯಾಂತವಾದ ಶ್ರುತಿವಾಕ್ಯವು ಪ್ರಬಲ ವಾದ್ದರಿಂದ ಉಪಕ್ರಮವೇ ಬಾಧಿತವಾಗಿ ಹೋಗುವುದೆನ್ನುವ ಮಿಥ್ಯಾವಾದಿಯೇ ಕೇಳು; ತಪಸಾ ಎಂಬುವ ತೃತೀಯಾಂತವಾದ ಶ್ರುತಿಯು ನಿನ್ನ ದೃಷ್ಟಿಗೆ ಬಿದ್ದಿ ಲ್ಲವೆ? ನೋಡು; ನಾವು ಹೇಳುವ ಸಮುಸಮುಚ್ಚಯದ ಪಕ್ಷದಲ್ಲಿ ಉಪಕ್ರಮವಾ ಕ್ಯಕ್ಕೂ ವಿರೋಧವಿಲ್ಲ. ಈ ಮಂತ್ರದ ಪೂರ್ವಾರ್ಧದಿಂದ ಸಮುಸಮುಚ್ಚಯವೇ ಸ್ಪಷ್ಟವಾಗಿ ತೋರುತ್ತಿರುವಲ್ಲಿ ಉತ್ತರಾರ್ಧದಲ್ಲಿ ಹೇಳಿದ ಕ್ರಮವು ಅವಿದ್ಯೆ ಯಿಂದ ಮಲಗಳು ನಾಶವಾಗಿ ಜ್ಞಾನದಿಂದ ಶಿವತ್ವ ಪ್ರಾಪ್ತಿಯಾಗುವುದೆಂಬುವ ಕ್ರಮದಲ್ಲಿ ಪರ್ಯವಸನ್ನವಾಗುವದು. ಎಂದು ಹೇಳಿದರೆ ಬಾಧಕವೇನು? ಮತ್ತು ವೇದಾಂತಸಾರೋಪನಿಷತ್ತಿನಲ್ಲಿ ಶಿವಲಿಂಗಧಾರಣ ಶಿವಲಿಂಗಪ್ರಸಾದಗ್ರಹಣ ಮೊದಲಾದ ಪತಿಕರ್ಮಗಳು ಸಾಕ್ಷಾತ್ ಮೋಕ್ಷಕ್ಕೆ ಕಾರಣಗಳೆಂದು ಕಂಠೋ ಕ್ತವಾಗಿ ಹೇಳಲ್ಪಟ್ಟಿರುವವು. ಮತ್ತು ಮೋಕ್ಷಾರ್ಥಿಗಳ ಮುಕ್ತಿಗೆ ಲಿಂಗಧಾರ ಣವು ಅವಶ್ಯಕವೆಂದು ಪುರಾಣವಿರುವುದರಿಂದಲೂ, ಪತಿಕರ್ಮಗಳು ಮೋಕ್ಷಕ್ಕೆ ಕಾರಣಗಳೇ ಹೊರತು ಅನ್ಯಥಾ ಸಿದ್ಧವಾಗುವುದಿಲ್ಲವು.

ಇತಿ ಕಂಠರವೇಣೈವ ಶಿವಲಿಂಗಧಾರಣ ಶಿವಪ್ರಸಾದಗ್ರಹಣಾದಿ ಪತಿಕರ್ಮ ಣಾಂ ಸಾಕ್ಷಾನ್ಮೋಕ್ಷ ಜನಕತ್ವಸ್ಯೋಕ್ತತ್ವಾತ್. ಮೋಕ್ಷಾರ್ಥಿನಾಂ ಮು ಕ್ತಿಹೇತುರ್ಲಿಂಗಧಾರಣಮಿಷ್ಯತೇ. ಇತಿ ಪುರಾಣವಚನಾಚ್ಚ, ನಾನ್ಯಥಾ ಸಿದ್ಧಾನಿಪತಿಕರ್ಮಾಣಿ. ತಥಾಚ, ನಕರ್ಮಣಾ'' ಕರ್ಮಣಾಬಧ್ಯತೇ'' ಇತ್ಯಾದಿ ಶ್ರುತಿಸ್ಮೃತಿಭ್ಯಾಂ ಪಶುಕರ್ಮತ್ಯಾಗೋ ವಿಹಿತೋ ನತುಪತಿಕರ್ಮತ್ಯಾಗ ಇತಿ ಮೋಕ್ಷಫಲಕತ್ವಾದ್ಯನೇಕ ಶ್ರುತಿಬಲಾದವಗಂತವ್ಯಃ. ಪಶುಕರ್ಮತ್ಯಾಗಿ ನಾಂ ವೀರಶೈವಾನಾಂ ಪಶುಕರ್ಮಾಂಗಭೂತ ತಂತುಮಯ ಯಜ್ಞೋಪವೀ ತಾದಿ ಪ್ರಾಕೃತಾಶ್ರಮಧರ್ಮತ್ಯಾಗೋಽಪಿ, ನಕರ್ಮಣಾ, ಇತ್ಯಾದಿನೈವ ಸೂಚಿತ ಇತ್ಯಭ್ಯುಪೇಯಂ. ಕರ್ಮಾಂಗಭೂತ ಯಜ್ಞೋಪವೀತಾದೀನಾಂ ಕರ್ಮಾಂಗತ್ವಂತು ಶೇಷಿಕರ್ಮಪರಿತ್ಯಾಗೆ ಸುತರಾಂ ತತ್ಪರಿತ್ಯಾಗೌಚಿತ್ಯಾತ್ ತೇಷಾಂ ಕ್ರಿಯಾಂಗಂ ತದ್ಧಿವೈಸ್ಮೃತಂ | ಇತ್ಯಾದಿ ಶ್ರುತಿವಾಕ್ಯೈರ್ನಿಶ್ಚೀಯತೇ. ನನುಪಶುಕರ್ಮಣಾಮಪಿ ನಿಷ್ಕಾಮನಯೈವಾನುಷ್ಠಾನಾತ್ ಪತಿಕರ್ಮತ್ವಾತ್.

---

ಇದರಿಂದ ''ನಕರ್ಮಣಾ'' ಮೊದಲಾದ ಕರ್ಮನಿಂದಾ ಪ್ರತಿಪಾದಕಗಳಾದ ವಾಕ್ಯಗಳಿಗೆ ಜ್ಯೋತಿಷ್ಟೋಮಾದಿ ಸ್ವರ್ಗಸಾಧನವಾದ ಪಶುಕರ್ಮತ್ಯಾಗವನ್ನು ಹೇಳುವುದರಲ್ಲಿ ತಾತ್ಪರ್ಯವೇ ಹೊರತು ಶಿವಲಿಂಗಧಾರಣ ಶಿವಲಿಂಗಯಜನ ಮೊ ದಲಾದ ಮೋಕ್ಷಸಾಧಕಗಳಾದ ಪತಿಕರ್ಮತ್ಯಾಗವನ್ನು ಹೇಳುವುದರಲ್ಲಿ ಆ ಮಂತ್ರಗಳಿಗೆ ತಾತ್ಪರ್ಯವಿಲ್ಲವು. ಪಶುಕರ್ಮಗಳನ್ನು ಅಂಗೀಕರಿಸದ ಲಿಂಗಾಂಗಿ ಗಳೆಂದು ಕರೆಯುವ ವೀರಶೈವರಿಗೆ ಪಶುಕರ್ಮಗಳಿಗೆ ಅಂಗಗಳಾದ ತಂತುಮಯ ಯಜ್ಞೋಪವೀತ ಮೊದಲಾದ ಪ್ರಾಕೃತವಾದ ಆಶ್ರಮ ಧರ್ಮಗಳೂ ಕೂಡ ಯೋಗ್ಯಗಳಲ್ಲವೆಂದು ನಕರ್ಮಣಾ'' ನಾಸ್ತ್ಯಕೃತಃ'' ಮೊದಲಾದ ಶ್ರುತಿಗಳಿಂದ ನಿಶ್ಚಯಿಸಬೇಕಾಗಿದೆ. ಯಜ್ಞೋಪವೀತ ಮೊದಲಾದವುಗಳು ಪಶುಕರ್ಮಗಳಿಗೆ ಅಂಗಗಳೆಂಬುವುದು ''ಕ್ರಿಯಾಂಗಂತದ್ಧಿವೈಸ್ಮೃತಂ'' ಎಂಬ ಬ್ರಹ್ಮೋಪನಿಷತ್ತು ಮೊದಲಾದವುಗಳಿಂದ ತಿಳಿಯುತ್ತದೆ. ಯದ್ಯಪಿ ಜ್ಯೋತಿಷ್ಟೋಮಾದಿ ಪಶುಕ ರ್ಮಗಳು ಕೂಡಾ ನಿಷ್ಕಾಮದಿಂದ ಆಚರಿಸಲ್ಪಟ್ಟರೆ ಅವೂಕೂಡ ಮೋಕ್ಷಸಾಧ ನವಾದ ಪತಿಕರ್ಮಗಳೇ ಆಗುತ್ತವೆಂದು ಹೇಳಿದ್ದರೂ ಅವು ವೀರಶೈವರಿಂದ ಆಚರಿಸಲು ಯೋಗ್ಯಗಳಲ್ಲವೆಂದು ಕ್ರಿಯಾಸಾರವೆಂಬ ನೀಲಕಂಠ ಭಾಷ್ಯಕಾರಿಕೆ ಯಲ್ಲಿ ಅನೇಕ ಜನ್ಮಶುದ್ಧಾನಾಂ ಶ್ರೌತಸ್ಮಾರ್ತಾನುವರ್ತಿನಾಂ'' ಎಂಬ



ತದನುಷ್ಠಾನೆ ತದಂಗಭೂತ ಯಜ್ಞೋಪವೀತಾದೀನಾ ಮಪ್ಯಾವಶ್ಯಕತ್ವಾತ್, ಕಥಂತತ್ಪರಿತ್ಯಾಗಃ. ಇತಿಚೇತ್ಸತ್ಯಂ. ನಿಷ್ಕಾಮಸಮನುಷ್ಠಾನಾತ್ಪತಿಕರ್ಮತ್ವ ಮಪ್ಯಯೇತ್. ಇತ್ಯನೇಕ ಗ್ರಂಥವಚನಾನುಗುಣ್ಯೇನ ತಾನಿ ಪತಿಕರ್ಮಾಣಿ ಭವಂತಿ. ತಥಾಪಿನೋಽಸ್ಮಾಕಂ ತದನುಷ್ಠಾನೇ ಪ್ರಯೋಜನಂ ಕಿಂಚಿತ್. ತೇಷಾಂ ನಿಷ್ಕಾಮಕರ್ಮಣಾಂ, ಶಿವಭಕ್ತ್ಯುದಯಪರ್ಯಂತಂ ನಿಯಮೇನಾನು ಷ್ಠೇಯತ್ವಾತ್. ಅಸ್ಮಿನ್ನರ್ಥೆ ''ಅನೇಕಜನ್ಮಶುದ್ಧಾನಾಂ ಶ್ರೌತಸ್ಮಾರ್ತಾನುವ ರ್ತಿನಾಂ | ನರಾಣಾಂ ಕ್ಷೀಣಪಾಪಾನಾಂ ಶಿವೇಭಕ್ತಿಃಪ್ರಜಾಯತೇ'' ಇತ್ಯಾದಿ ವಚನಾನ್ಯನುಸಂಧೆಯಾನಿ. ಇತ್ಥಂ ಚ ಕರ್ಮಪರಿತ್ಯಾಗವಿಧಾಯಕವಾಕ್ಯಾನಾಂ ಸ್ಥೂಲಕರ್ಮವಿಷಯತ್ವಮೇವ. ತಥಾಚ, ನಸ್ಥೂಲಕರ್ಮಣಾಂ, ಸಮುಚ್ಚಯ ಘಟಿತತ್ವಂ. ತತ್ಪರಿತ್ಯಾಗೆ ತದಂಗಪ್ರಾಕೃತ ತಂತುಮಯ ಯಜ್ಞೋಪವೀತಾದೀ ನಾಮಪಿ ಸುತರಾಂ ಪರಿತ್ಯಾಗೋ ಮುಮುಕ್ಷೂಣಾಂ ವೀರಶೈವಾನಾಂ ವಿಹಿತ ಇತಿಬೋಧ್ಯಂ. ಏತದ್ವಿಷಯಕ ವಿಸ್ತೃತವಿಚಾರಸ್ತುಮತ್ಕೃತ ಬ್ರಹ್ಮಸೂತ್ರ ಶಾಂಕರೀವೃತ್ತೌದ್ರಷ್ಟವ್ಯಃ ||೧೧||

---

ಪ್ರಮಾಣವಿರುವುದರಿಂದ ಕ್ರಿಯಾವರಣಗಳು ನಾಲ್ಕು. ಜ್ಞಾನಾವರಣಗಳು ನಾಲ್ಕು. ಅಂತೂ ಎಂಟು ಆವರಣಗಳ ಅನುಷ್ಠಾನನಿಷ್ಠೆಯಲ್ಲಿ ಗರಿಷ್ಠನಾದ ವೀರಶೈವನಿಗೆ ಏನೊಂದೂ ಪ್ರಯೋಜನವನ್ನುಂಟುಮಾಡದ ಜೈಮಿನ್ಯಾಚಾರ್ಯ ರಿಂ ರಚಿತವಾಗಿರುವ ಪೂರ್ವಮೀಮಾಂಸೆಯಲ್ಲಿ ಹೇಳಲ್ಪಟ್ಟ ಪಶುವಿಶಸನಾದಿ ಕರ್ಮಗಳು ಸಕಾಮದಿಂದಾಚರಿಸಲ್ಪಟ್ಟರೆ ಪಶುಕರ್ಮಗಳಾಗುವುವು. ನಿಷ್ಕಾಮ ದಿಂದಾಚರಿಸಲ್ಪಟ್ಟರೆ ಪತಿಕರ್ಮಗಳೇ ಆಗುವುವು ಎಂದು ಹೇಳಿದರೂ ಪೂರ್ವ ಕಾಂಡದಲ್ಲಿ ಹೇಳಿದ ಸಕಲ ಕರ್ಮಗಳು ಸಕಾಮದಿಂ ಮಾಡಲ್ಪಟ್ಟರೂ, ನಿಷ್ಕಾ ಮದಿಂ ಮಾಡಲ್ಪಟ್ಟರೂ, ಲಿಂಗಾಂಗಿಯಾದ ವೀರಶೈವನಿಂದಾದರಿಸಲ್ಪಡತಕ್ಕವು ಗಳಲ್ಲವೆಂದು ಸ್ವಸಿದ್ಧಾಂತದಲ್ಲಿ ನಿರೂಪಣ ಮಾಡಿರುವುದರಿಂದ ಆ ಕರ್ಮಗಳೆಲ್ಲವೂ ಪಶುಕರ್ಮಗಳಲ್ಲಿಯೇ ಸೇರುವುವು. ಈ ಪಶುಕರ್ಮಗಳಿಗೆ ಅಂಗಗಳಾದ ತಂತು ಮಯವಾದಪ್ರಾಕೃತ ಯಜ್ಞೋಪವೀತಾದಿಗಳನ್ನು ವೀರಶೈವನು ದೂರದಲ್ಲಿಯೇ ಬಿಟ್ಟುಬಿಡಬೇಕೆಂದು ಸಿದ್ಧವಾಯಿತು. ಈ ವಿಷಯದಲ್ಲಿ ಇದರ ರಹಸ್ಯವೆಲ್ಲಾ ಪೂರ್ವಪಕ್ಷ ಸಮಾಧಾನಪೂರ್ವಕವಾಗಿ ಶಾಂಕರೀಕಾರನಾದ ನನ್ನಿಂದ ಬರೆಯ ಲ್ಪಟ್ಟ ಬ್ರಹ್ಮಸೂತ್ರ ಶಾಂಕರೀವೃತ್ತಿ ಎಂಬ ಗ್ರಂಥದಲ್ಲಿ ಸ್ಪಷ್ಟಮಾಡಿರುವುದರಿಂದ

ಮೂ॥ ಅಂಧಂತಮಃ ಪ್ರವಿಶಂತಿ ಯೇಽಸಂಭೂತಿಮುಪಾ
ಸತೆ । ತತೋಭೂಯ ಇವ ತೇ ತಮೋಯ ಉ
ಸಂಭೂತ್ಯಾಗ್ँರತಾಃ ॥೧೨॥

ಶಾಂ॥ ಕರ್ಮಜ್ಞಾನ ಸಮ ಸಮುಚ್ಚಯಂ ನಿರೂಪ್ಯ, ಶಕ್ತಿಶಿವೋಪಾಸ ನೈಕೈಕನಿಂದಾಪೂರ್ವಕಂ ಶಕ್ತಿವಿಶಿಷ್ಟ ಶಿವಲಿಂಗೋಪಾಸನಫಲಂ ಮುಕ್ತಿ ಮಾಹ, ಯದ್ವಾ ಸ್ಥೂಲಸೂಕ್ಷ್ಮ ಶಕ್ತಿವಿಶಿಷ್ಟ ಸಗುಣನಿರ್ಗುಣೋಪಾಸನಾ ನ್ಯತರಸ್ಯಾನಿತ್ಯ ಸಿದ್ಧ್ಯಾದಿರೂಪ ಫಲಮುಕ್ತ್ವಾ, ತತ್ಸಮುಚ್ಚಯಸ್ಯ ಮುಕ್ತಿ ಫಲಮಾಹ ಅಂಧಂತಮ ಇತಿ—ಯೆ ಶಿವಯೋಗ ಭೂಮಿಕಾಮಾಪನ್ನಾಃ, ಅಸಂ ಭೂತಿಂ ಕಾರಣಾತ್ಮಿಕಾಂ ಶಕ್ತಿಮೇವ, ಉಪಾಸತೆ, ಅನುಸಂದಧತೆ, ಅರ್ಥಾತ್ ಮಿತಸಿದ್ಧೀರಭಿಷ್ಯಂತಃ | ಇಚ್ಛಾ ಶಕ್ತಿರುಮಾಕುಮಾರಿ | ಇತಿ ಶಿವಸೂತ್ರೋಕ್ತ

---

ಆಗ್ರಂಥವನ್ನು ನೋಡಿ ತಿಳಿದುಕೊಳ್ಳಬೇಕೆಂಬುವುದೇ ಈ ವ್ಯಾಖ್ಯಾನದ ಅಭಿ ಪ್ರಾಯವು. ॥೧೧॥

ಅರ್ಥ—ಯೆ—ಯಾವ ಶಿವಜ್ಞಾನ ಸಂಪನ್ನರು, ಅಸಂಭೂತಿಂ—ಕಾರಣಾ ತ್ಮಕವಾದ ಶಕ್ತಿಯನ್ನೇ, ಉಪಾಸತೆ—ಉಪಾಸನೆಯಂ ಮಾಡುವುರೋ; ತೆ— ಅವರು, ಅಂಧಂತಮಃ—ಪ್ರಕಾಶಶೂನ್ಯವಾದ ಸಂಸಾರವನ್ನು, ಪ್ರವಿಶಂತಿ— ಸೇರುತ್ತಾರೆ. ಯ ಉ—ಯಾವ ಯೋಗಿಗಳು, ಸಂಭೂತ್ಯಾಂ—ಶಕ್ತಿರಹಿತವಾದ ಶಿವದೇವತೆಯಲ್ಲಿ, ರತಾಃ—ಆಸಕ್ತರೊ; ತೆ—ಆ ಕೇವಲ ಶಿವನನ್ನು ಉಪಾಸನೆ ಮಾಡುವವರು, ತತಃ—ಅದಕ್ಕಿಂತಲೂ, ಭೂಯ ಇವ—ಅಧಿಕವಾದ, ತಮಃ— ಅಜ್ಞಾನಮಯವಾದ ಸಂಸಾರವನ್ನು, ಪ್ರವಿಶಂತಿ—ಹೊಂದುವರು.

ತಾ॥ ಈವರಿವಿಗೂ ಭಗವತಿಯಾದ ಶ್ರುತಿಯು ಕರ್ಮಜ್ಞಾನ ಸಮುಸ ಮುಚ್ಚಯವನ್ನು ನಿರೂಪಿಸಿ. ಶಿವರಹಿತವಾದ ಕೇವಲಶಕ್ತಿಯನ್ನು ಉಪಾಸನೆ ಮಾಡುವವರೂ ಶಕ್ತಿರಹಿತನಾದ ನಿರ್ಗುಣ ಶಿವೋಪಾಸನೆಯಂ ಮಾಡುವವರೂ ಪುನಃ ಸಂಸಾರ ಚಕ್ರದಲ್ಲಿ ಸುತ್ತುವುರೆಂಬುದನ್ನು ಈ ಮಂತ್ರವು ಪ್ರತಿಪಾದಿಸು ವುದು. ಅಂದರೆ—ಮುಕ್ತಿಫಲವನ್ನು ಕೊಡುತ್ತಿರುವ ಶಕ್ತಿವಿಶಿಷ್ಟನಾದ ಶಿವನ ಉಪಾಸನೆಯಂ ಬಿಟ್ಟು ಶಿವಸೂತ್ರದಲ್ಲಿ "ಮಿತಸಿದ್ಧೀರಭಿಲಷ್ಯಂತಃ" ಎಂದು ಹೇಳಿದಂತೆ, ಅಲ್ಪಸ್ವಲ್ಪ ಅನಿತ್ಯವಾದ ಸಿದ್ಧಿಗಳನ್ನು ಕೊಡುತ್ತಿರುವ ಇಚ್ಛಾಶಕ್ತಿ ಯನ್ನು ಮಾತ್ರ ಯಾರು ಆರಾಧಿಸುವುರೋ ಅವರು ಆ ಸಿದ್ಧಿಗಳನ್ನು ಅನುಭವಿ



ಶಕ್ತಿಮೇವ ಉಪಾಸತೆ. ತೇಽಂಧಂತಮಃ ಅದರ್ಶನಾತ್ಮಕಂ ಸಂಸಾರಂ, ಪ್ರವಿ ಶಂತಿ. ತತಃ ತಸ್ಮಾದಪಿ. ಭೂಯ ಇವ. ಬಹುತರಮೇವ. ತಮಃ ಅಜ್ಞಾನಾತ್ಮಕಂ ಸಂಸಾರಂ ತೆ ಪ್ರವಿಶಂತಿ. ತೆ ಕೆ ಇತ್ಯತ್ರಾಹ, ಯ ಉ" ಇತ್ಯಾದಿನಾ—ಯೆ ಉ ಯೋಗಿನಃ, ಸಂಭೂತ್ಯಾಂ ಶಿವದೇವತಾಯಾಂ, ರತಾಃ ಆಸಕ್ತಾಃ, ಯದ್ವಾ ಅವಿದ್ಯಮಾನಾ ಸಂಭೂತಿಃ ಸ್ಥೂಲಪರಿಣಾಮೋಯಸ್ಯಸಃ ಅಸಂಭೂತಿಃ, ಸೂ ಕ್ಷ್ಮಚಿದಚಿತ್ಪಂಚಾಕಾರ ಶಕ್ತಿವಿಶಿಷ್ಟ ಇತ್ಯರ್ಥಃ, ತಮೇವ, ಯೆ ಉಪಾಸತೆ. ಸಂಭೂತ್ಯಾಂ ಸ್ಥೂಲ ಚಿದಚಿತ್ಪಂಚಾಕಾರ ಶಕ್ತಿವಿಶಿಷ್ಟೆ ಕಾರ್ಯಬ್ರಹ್ಮಣಿ ಶೋ ಣೊಧಾವತೀತ್ಯತ್ರೇವ ಸಂಭೂತಿಪದಸ್ಯಲಾಕ್ಷಣಿಕತ್ವಂ ಬೋಧ್ಯಂ ಅನ್ಯತ್ಪೂ ರ್ವವದ್ದೃಷ್ಟವ್ಯಂ ॥೧೨॥

ಮೂ॥ ಅನ್ಯದೆವಾಹುಃ ಸಂಬವಾದನ್ಯದಾಹು ರಸಂಭವಾ
ತ್ । ಇತಿಶುಶ್ರುಮ ದೀರಾಣಾಂ ಯೇನಸ್ತದ್ವಿ
ಚಚಕ್ಷಿರೆ ॥೧೩॥

ಶಾಂ॥ ಏಕೈಕೋಪಾಸನಸ್ಯಫಲಮಾಹ ಅನ್ಯದಿತಿ—ಸಂಭವಾತ್ ಸ್ಥೂಲ

---

ಸಿದಮೇಲೆ ಪುನಃ ಸಂಸಾರ ಚಕ್ರದಲ್ಲಿ ಸುತ್ತುವರು. ಶಕ್ತಿರಹಿತನಾದ ಕೇವಲ ನಿರ್ಗುಣ ಬ್ರಹ್ಮವನ್ನು ಯಾರು ಆರಾಧಿಸುವುರೋ ಆ ಕೇವಲ ನಿರ್ಗುಣೋಪಾಸ ಕರು ಹಿಂದೆ ಹೇಳಿದ ಶಕ್ತ್ಯುಪಾಸಕರಿಗಿಂತಲೂ ವಿಾರಿದ ಸಂಸಾರ ಸಾಗರದಲ್ಲಿ ಮುಳುಗುವರು. ಆದುದರಿಂದ ಕೇವಲ ಶಕ್ತ್ಯುಪಾಸನೆ, ಕೇವಲ ಶಿವೋಪಾಸನೆಗ ಳಲ್ಲಿ ಆಸಕ್ತಿಯನ್ನು ಇಡದೆ ಮುಮುಕ್ಷುಗಳು ಶಕ್ತಿವಿಶಿಷ್ಟನಾದ ಶಿವನನ್ನು ಆರಾ ಧಿಸಿ ಮುಕ್ತಾತ್ಮರಾಗುವರು. ಮತ್ತು ಕೇವಲ ಸೂಕ್ಷ್ಮಶಕ್ತಿವಿಶಿಷ್ಟವಾದಕಾ ರಣ ಬ್ರಹ್ಮವನ್ನೇ ಆಗಲಿ, ಕೇವಲ ಸ್ಥೂಲಶಕ್ತಿವಿಶಿಷ್ಟವಾದ ಕಾರ್ಯಬ್ರಹ್ಮವನ್ನೇ ಆಗಲಿ ಯಾರು ಆರಾಧಿಸುವುರೋ ಅವರು ಮುಕ್ತಿ ಸಾಮ್ರಾಜ್ಯವನ್ನು ಪಡೆ ಯದೆ, ಅಲ್ಪ ಸ್ವಲ್ಪ ಸಿದ್ಧಿಗಳನ್ನು ಅನುಭವಿಸಿ, ಮರಳಿ ಜನ್ಮವನ್ನೇ ಹೊಂದುವು ರಾದಕಾರಣ, ಸ್ಥೂಲಶಕ್ತಿವಿಶಿಷ್ಟವಾದ, ಕಾರ್ಯಬ್ರಹ್ಮರೂಪವಾದ ಇಷ್ಟಲಿಂಗ ವನ್ನು ಸೂಕ್ಷ್ಮಶಕ್ತಿವಿಶಿಷ್ಟವಾದ, ಕಾರಣಬ್ರಹ್ಮರೂಪವಾದ ಪರಶಿವಲಿಂಗವನ್ನು ಯಾರು ಆರಾಧಿಸುವುರೋ ಆ ಶಿವಯೋಗಿಗಳೂ ಕೂಡ ಪುನರಾವೃತ್ತಿರಹಿತ ವಾದ ಮುಕ್ತಿಸುಖವನ್ನು ಅನುಭವಿಸುವರೆಂದು ಶಾಂಕರೀಕಾರರು ಈ ಮಂತ್ರ ಕ್ಕೆ ಎರಡುವಿಧವಾದ ಅಭಿಪ್ರಾಯಗಳನ್ನು ತೋರಿಸಿರುವುರು. ॥೧೨॥

ಶಕ್ತಿವಿಶಿಷ್ಟಾತ್ ಶಿವಲಿಂಗಾತ್, ತದುಪಾಸನಾದಿತ್ಯರ್ಥಃ. ಅನ್ಯದೇವ, ಮೋಕ್ಷಾದನ್ಯದೇವ ಸಿದ್ಧಿರೂಪಂ ಫಲಮಾಹುಃ. ಅಸಂಭವಾತ್ ಸೂಕ್ಷ್ಮಶಕ್ತಿವಿಶಿಷ್ಟ ಸರ್ವಕಾರಣ ಪರಶಿವೋಪಾಸನಾತ್. ಅನ್ಯದೇವ ಮೋಕ್ಷಾದನ್ಯದೇವ ಅಣಿಮಾದ್ಯೈಶ್ವರ್ಯಂಫಲಮಾಹುಃ, ನಿರ್ಗುಣ ನಿಷ್ಕ್ರಿಯ ನಿಷ್ಕಳಂಕ ಅವಾಙ್ಮಾನಸಗೋಚರ ಇತ್ಯಾದ್ಯುಪನಿಷಚ್ಛಬ್ದ ಪ್ರತಿಪಾದ್ಯ ಸೂಕ್ಷ್ಮಶಕ್ತಿವಿಶಿಷ್ಟಮೇವ. ಯೆ ಉಪಾಸತೆ. ತೇಷಾಮನಿತ್ಯಫಲಮೇವ" ಯೆಚಮನಸೈವಾನುದ್ರಷ್ಟವ್ಯಂ ಮನಸೈವೇದಮಾಪ್ತವ್ಯಂ" ದೃಶ್ಯತೆ ತ್ವಗ್ರ್ಯಯಾಬುಧ್ಯಾ ಸೂಕ್ಷ್ಮಯಾ ಸೂಕ್ಷ್ಮದರ್ಶಿಭಿಃ | ಇಷ್ಟಮೂರ್ಜಂ ತಪಸಾನುಯಚ್ಛತಿ" ಬುಧ್ಯಾಲೋಕನ ಸಾಧ್ಯೆಸ್ಮಿನ್ನಸ್ತಿ ಸ್ವಸ್ತಮಿತಾಯದಿ | ಬುದ್ಧಿಯೋಗಮುಪಾಶ್ರಿತ್ಯಮಚ್ಚಿತಃ ಸತತಂ ಭವ" ಇತಿ ಶ್ರುತಿಸ್ಮೃತಿಪ್ರಸಿದ್ಧ ಮನೋದೃಕ್ಕಲಾಗ್ರಾಹ್ಯ ಸ್ಥೂಲ ಶಕ್ತಿವಿಶಿಷ್ಟ ಶಿವಲಿಂಗಮಾತ್ರೋಪಾಸಕಾನಾಮಪಿ ಮೋಕ್ಷಾದನ್ಯತ್ಫಲಮೇವ. ಇತಿ, ಇತ್ಥಂ ಧೀರಾಣಾಂ ಧೀರಾಣಾಂ. ಶಿವಜ್ಞಾನಿನಾಂ ಶುಶ್ರುಮ ಶ್ರುತವಂತಃ ಯೆಧೀರಾಃ ನಃ, ಅಸ್ಮಭ್ಯಂ ತತ್ ಸಿದ್ಧಿರೂಪಂ ಫಲಂವ್ಯಾಚಚಕ್ಷಿರೆ ವ್ಯಾಖ್ಯಾತವಂತಃ||೧೩||

---

ಅರ್ಥ— ಸಂಭವಾತ್—ಕಾರ್ಯಬ್ರಹ್ಮೋಪಾಸನೆಯ ದಶೆಯಿಂದ, ಅನ್ಯದೇವ—ಮುಕ್ತಿಗಿಂತಲೂ ಬೇರೆಯಾದ ಸಿದ್ಧಿಯನ್ನು, ಅಸಂಭವಾತ್—ಕಾರಣ ಬ್ರಹ್ಮೋಪಾಸನೆಯ ದಶೆಯಿಂದ, ಅನ್ಯದೇವ—ಮುಕ್ತಿಗಿಂತಲೂ ಬೇರೆಯಾದ ಅಣಿಮಾದ್ಯಷ್ಟೈಶ್ವರ್ಯವನ್ನು, ಆಹುಃ—ಹೇಳುತ್ತಾರೆ. ಇತಿ—ಈ ರೀತಿಯಾಗಿ, ಧೀರಾಣಾಂ—ಧೀರರಾದ ಜ್ಞಾನಿಗಳನ್ನು, ಶುಶ್ರುಮ—ಕೇಳುವವರಾಗಿ, ಯೆ—ಯಾರು, ನಃ—ನಮ್ಮಗಳ ದಶೆಯಿಂದ, ತತ್—ಅಣಿಮಾದಿ ಸಿದ್ಧಿಯನ್ನು, ವ್ಯಾಚಚಕ್ಷಿರೆ—ಹೇಳುವರೊ;

ತಾ|| ಸ್ಥೂಲಶಕ್ತಿವಿಶಿಷ್ಟನಾಗಿಯೂ ಕಾರ್ಯರೂಪನಾಗಿಯೂ ಇರುವ ಶಿವಲಿಂಗವನ್ನುಪಾಸನೆಮಾಡುವುದರಿಂದ ನಾನಾವಿಧಗಳಾದ ಸಿದ್ಧಿಗಳೆಂಬ ಫಲಗಳುಂಟಾಗುವವು. ಸೂಕ್ಷ್ಮಶಕ್ತಿಯಿಂದೊಡಗೂಡಿದ ನಿರ್ಗುಣತ್ವ ನಿಷ್ಕಳತ್ವ ಮೊದಲಾದ ಲಕ್ಷಣಯುಕ್ತನಾದ ಕಾರಣರೂಪನಾದ ಪರಶಿವನುಪಾಸನೆಯಿಂ ಅಣಿಮಾದ್ಯಷ್ಟ ಐಶ್ವರ್ಯಗಳು ಸಿದ್ಧಿಸುವುವು. ಅಂದರೆ—ಪುನಃ ಜನನ ಮರಣಾದಿಗಳಿಗೊಳಗಾಗದ ಮುಕ್ತಿರೂಪವಾದ ನಿತ್ಯಫಲವು ಒಂದೊಂದರ ಉಪಾಸನೆಯಿಂದುಂಟಾಗುವುದಿಲ್ಲವು. ಕಾರ್ಯಬ್ರಹ್ಮರೂಪವಾದ ಲಿಂಗೋಪಾಸನೆಯನ್ನೂ ಸೂಕ್ಷ್ಮವಾದ ಕಾರಣ ಬ್ರಹ್ಮರೂಪವಾದ ಪರಶಿವೋಪಾಸನೆಯನ್ನೂ ಯರಡನ್ನೂ ಸಮವಾಗಿ ಆರಾಧಿಸುವವನಿಗೇನೇ ಮುಕ್ತಿಸುಖವು ದೊರೆಯುವದು· ಹಾಗಿಲ್ಲದೆ ಒಂದೊಂದನ್ನು ಉಪಾಸನೆ ಮಾಡುವ ಉಪಾಸಕನಿಗೆ ಮೋಕ್ಷಕ್ಕಿಂತಲೂ ಬೇರೆಯಾದ ಅನಿತ್ಯಫಲಗಳುಂಟಾಗುವುದಲ್ಲದೆ ಮುಕ್ತಿಸುಖವು ಎಂದಿಗೂ ಉಂಟಾಗದು. ಎಂಬುವುದೇ ಈ ಮಂತ್ರ ವ್ಯಾಖ್ಯಾನದ ಮುಖ್ಯಾಭಿಪ್ರಾಯವು. ||೧೩||



**ಮೂ|| ಸಂಭೂತಿಂಚ ವಿನಾಶಂಚ ಯಸ್ತದ್ವೇದೋಭಯಂ ಸಹ। ವಿನಾಶೇನ ಮೃತ್ಯುಂತೀರ್ತ್ವಾಸಂಭೂತ್ಯಾಽಮೃತಮಶ್ನುತೆ ||೧೪||**

ಶಾಂ| ಸಗುಣ ನಿರ್ಗುಣೋಪಾಸನಾನ್ಯತರಸ್ಯ ಮೋಕ್ಷಭಿನ್ನಸಿಧ್ಯಾದಿ ಫಲಮುಕ್ತ್ವಾ, ತಚ್ಛಿವಸ್ವರೂಪ ಜ್ಞಾನಾನಂತರಂ ತತ್ಸಮುಚ್ಚಯಸ್ಯಮುಕ್ತಿ ಫಲಮಾಹ. ಸಂಭೂತಿಮಿತ್ಯಾದಿನಾ—ಸಂಭೂತಿ ಮಿತ್ಯತ್ರಅವರ್ಣಲೋಪೋ ದ್ರಷ್ಟವ್ಯಃ, ಅಸಂಭೂತಿಂ, ಪೂರ್ವೋಕ್ತವಿಮರ್ಶಶಕ್ತಿಂ, ವಿನಾಶಂಚ ವಿನಶ್ಯತೆ ವಿಶ್ವಂಯತ್ರೇತಿವಿನಾಶಃ. ತಂ ವಿನಾಶಾದ್ಯಾಶ್ರಯಮಿತ್ಯರ್ಥಃ, ಅತ್ರಾಪ್ಯವರ್ಣ

---

ಅರ್ಥ—ಯಃ—ಯಾವ ಭಕ್ತನು, ಸಂಭೂತಿಂಚ—ಹಿಂದೆ ಹೇಳಿದ ವಿಮರ್ಶಶಕ್ತಿಯನ್ನು, ವಿನಾಶಂಚ—ನಾಶವಿಲ್ಲದ ಶಿವನನ್ನೂ, ತತ್ ಉಭಯಂ—ಇವೆರಡನ್ನೂ, ಸಹ—ಜೊತೆಯಲ್ಲಿ, ವೇದ—ಆರಾಧಿಸುವನೋ, ಸಃ—ಅವನು. ವಿನಾಶೇನ-ನಿತ್ಯನಾದ ಶಿವನೊಡನೆ ಕೂಡಿ, ಮೃತ್ಯುಂ-ದುಃಖವನ್ನು, ತೀರ್ತ್ವಾ-ಅತಿಕ್ರಮಿಸಿ, ಅಸಂಭೂತ್ಯಾ—ಶಕ್ತ್ಯುಪಾಸನೆಯಿಂದ, ಅಮೃತಂ—ನಿತ್ಯಸುಖವನ್ನು, ಅಶ್ನುತೆ—ಹೊಂದುವನು.

ತಾ| ಬಿಂದುರೂಪಾಪರಾಶಕ್ತಿಃ" ಎಂಬ ಪ್ರಮಾಣದಿಂದ ಪರಿಮಳವು ಪುಷ್ಪವೂ ಬಿಡದೆ ಒಂದಕ್ಕೊಂದು ಶೇರಿಕೊಂಡಿರುವಂತೆಯೂ, ಅರ್ಥವು ಶಬ್ದವು ಒಂದನ್ನೊಂದನ್ನು ಬಿಡದೆ ಸದಾ ಕೂಡಿಕೊಂಡಿರುವಂತೆಯೂ, ಶಿವಶಕ್ತಿಗಳೆರಡೂ ಒಂದಕ್ಕೊಂದು ಅಗಲದೆ ಶೇರಿಕೊಂಡಿರುವುದಕ್ಕೆ ಲಿಂಗವೆಂದು ಹೇಳುವರು. ಈ ರೀತಿಯಾಗಿ ಶಿವಶಕ್ತ್ಯುಭಯಾತ್ಮಕವಾದ ಶಿವಲಿಂಗದಾರಾಧನೆಯೇ ಮುಕ್ತಿ ಸಾಮ್ರಾಜ್ಯಲಾಭಕ್ಕೆ ಕಾರಣವೆಂದು ತಿಳಿದು ಶಿವಶಕ್ತಿರೂಪವಾದ ಶಿವಲಿಂಗ

ಶೋಪೇನ ವಾ ಅವಿನಾಶಂ ವಿನಾಶಾದಿದೋಷರಹಿತಂಚ ಶಿವಂ, ವಿಗತಃ ವೀತಃ
ನಾಶಃ ಯಸ್ಯೇತಿವಾ ವಿನಾಶಃ ತಮಿತ್ಯರ್ಥಃ, ಯಃ—ಉಪಾಸಕಃ, ಉಭಯಂ—
ಶಕ್ತಿಶಿವೋಭಯಂ, ಸಹ—ಮಿಲಿತಂ. ಅನ್ಯೋನ್ಯಾವಿನಾಭಾವಯುಕ್ತಂ ಲಿಂಗ
ಮಿತ್ಯರ್ಥಃ, ತದುಕ್ತಮಾಗಮೇ“ ಬಿಂದುರೂಪಾಪರಾಶಕ್ತಿರ್ನಾದರೂಪಃ ಪರ
ಶ್ಶಿವಃ | ಬಿಂದುನಾದಾತ್ಮಕಂಲಿಂಗಂ ತಸ್ಮಾಚ್ಛಿವಶಿವಾತ್ಮಕಂ” ಇತಿ, ವೇದ-
ಉಪಾಸತೇ. ಸಃ ಉಪಾಸಕಃ ವಿನಾಶೇನ. ಅವಿನಾಶೇನ ವಿನಾಶಾದಿದೋಷರಹಿ
ತೇನ ಶಿವೇನ ಲಿಂಗೆಪ್ರಾಧಾನ್ಯತಃ ಶಿವೋಪಾಸನೇನೇತ್ಯರ್ಥಃ, ಮೃತ್ಯುಂ ಪ್ರತಿಕೂ
ಲವೇದನೀಯ ದುಃಖಾದಿಕಾರಣಮಲಂ ತೀರ್ತ್ವಾ ಅತಿಕ್ರಮ್ಯ, ಅಸಂಭೂತ್ಯಾ
ಲಿಂಗೆ ಪ್ರಾಧಾನ್ಯತಃ ಶಕ್ತ್ಯುಪಾಸನಯಾ ಅಮೃತಂ ಶಕ್ತಿವಿಕಾಸರೂಪಂ ಅಶ್ನುತೇ
ಪ್ರಾಪ್ನೋತೀತ್ಯರ್ಥಃ” ಯದ್ವಾ ಅಸಂಭೂತಿಂಚ ಪೂರ್ವೋಕ್ತಪ್ರಕಾರೇಣ
ಸೂಕ್ಷ್ಮಶಕ್ತಿವಿಶಿಷ್ಟ ನಿರ್ಗುಣಶಿವೋಪಾಸನಂಚ. ವಿನಾಶಂಚ. ಸ್ಥೂಲಶಕ್ತಿವಿಶಿ
ಷ್ಟಸಗುಣ ಶಿವೋಪಾಸನಂಚ ತದುಭಯಂ ನಿರ್ಗುಣ ಸಗುಣೋಪಾಸನಾದ್ವಯಂ
ಸಹ ಏಕಪುರುಷಕರ್ತೃಕಂ ಯಃ ಉಪಾಸಕಃ ವೇದ. ಮುಕ್ತ್ಯಸಾಧಾರಣ ಕಾರ
ಣತ್ವೇನ ಜಾನಾತಿ. ಜ್ಞಾತ್ವಾಚಾಚರತಿ. ಸಃ ಉಪಾಸಕಃ ವಿನಾಶೇನ ಸ್ಥೂಲ

---

ಸ್ತೋತ್ರ, ಶಿವಲಿಂಗಪೂಜೆ, ಶಿವಲಿಂಗಧ್ಯಾನ, ಇವುಗಳನ್ನು ಯಾವ ಭಕ್ತನು ಅನ
ವರತವು ಮಾಡುವುನೋ ಆತನಿಗೆ ಮುಕ್ತಿರಾಜ್ಯದ ಪಟ್ಟವು ಸಿದ್ಧಿಸುವುದಲ್ಲದೆ,
ಉಭಯರೂಪವಾದ ಲಿಂಗದಲ್ಲಿ ಪ್ರಾಧಾನ್ಯವಾದ ಶಿವೋಪಾಸನೆಯಂ ಮಾಡಿ,
ಶಿವೋಪಾಸನಾರೂಪವಾದ ಅವಲಂಬನದಿಂದ ದುಃಖಕಾರಣಗಳಾದ ಮಲಗ
ಳೆಲ್ಲಾ ನಷ್ಟವಾಗಿ ಸಂಸಾರ ಸಾಗರದಿಂದ ಎತ್ತಲ್ಪಟ್ಟು, ಪುನಶ್ಚ ಸಂಸಾರ
ಸಾಗರದಲ್ಲಿ ಬೀಳದೆ, ಆ ಶಿವನೊಡನೆ ಅವಿನಾಭಾವದಿಂದಿರುವ ಚಿಚ್ಛಕ್ತಿಯ
ಉಪಾಸನೆಯಿಂದ ಸಾಕ್ಷಾತ್ ಶಿವತ್ವವನ್ನೇ ಹೊಂದುವನು. ಈ ವಿಧವಾಗಿ ಶಿವ
ಚಿಚ್ಛಕ್ತಿ ಇವೆರಡರುಪಾಸನೆಗಳಿಂದ ಜೀವಭಾವಗಳೆಲ್ಲವೂ ಧ್ವಂಸವಾಗಿ ಸಕಲ
ಧುಃಖಗಳಿಂದ ಬಿಡಲ್ಪಟ್ಟು ಶಿವರೂಪತ್ವರೂಪವಾದ ಪರಮಾನಂದ ಪ್ರಾಪ್ತಿಯ
ನ್ನು ಹೊಂದಿ ಸುಖಿಸುವುದೇ ವೀರಶೈವನಿಗೆ ಇಷ್ಟವಾದ ಫಲವೆಂದು ಶಾಂಕರೀ
ವ್ಯಾಖ್ಯಾಕಾರರು ಈ ಮಂತ್ರಕ್ಕೆ ಒಂದು ವಿಧವಾದ ಅರ್ಥವನ್ನು ತೋರಿಸಿ,
ಮತ್ತೊಂದು ವಿಧವಾದ ವ್ಯಾಖ್ಯಾನವಂ ಮಾಡಿರುತ್ತಾರೆ, ಅದೇನಂದರೆ, ನಿರ್ಗು
ಣೋಪಾಸನೆ, ಸಗುಣೋಪಾಸನೆಗಳೆರಡೂ ಮುಕ್ತಿಗೆ ಕಾರಣಗಳು. ಯಾ



ಶಕ್ತಿ ವಿಶಿಷ್ಟಶಿವೋಪಾಸನೇನ ಮೃತ್ಯುಂ ಮರಣಾದಿಕಾರಣಂ ಕಾಮರ್ಾದಿಮ
ಲಂತೀರ್ತ್ವಾ-ಅತಿಕ್ರಮ್ಯ, ಅಸಂಭೂತ್ಯಾ ಸೂಕ್ಷ್ಮಶಕ್ತಿವಿಶಿಷ್ಟ ನಿರ್ಗುಣ ಶಿವೋ
ಪಾಸನಯಾ, ಅಮೃತಂ-ಅಮೃತತ್ವಂ, ಅಶ್ನುತೆ-ಪ್ರಾಪ್ನೋತೀತ್ಯರ್ಥಃ. ಉಕ್ತಂಚ
ಸಗುಣ ನಿರ್ಗುಣೋಪಾಸನಾದ್ವಯಸ್ಯಾಪಿ ಮುಕ್ತಿಫಲಕತ್ವಂ ಶ್ವೇತಾಶ್ವತರೋ
ಪನಿಷದಿ “ಹೃದಾಹೃದಿಸ್ಥಂ ಮನಸಾ ಯಏನಮೇವಂ ವಿದುರಮೃತಾಸ್ತೆಭವಂತಿ”
ಇತಿ, ಭಾವಗ್ರಾಹ್ಯಮನೀಡಾಖ್ಯಂ ಭಾವಾಭಾವಕರಂ ಶಿವಂ ಕಲಾಸರ್ಗಕರಂ
ದೇವಂ ಯೇವಿದುಸ್ತೇಜಹುಸ್ತನುಂ” ಇತಿಚ. ಅತ್ರಪ್ರಥಮವಾಕ್ಯೇನ ಪ್ರಾಣ
ಲಿಂಗಂ ನಿರ್ದಿಷ್ಟಂ. ಭಾವಗ್ರಾಹ್ಯಮಿತ್ಯನೇನತು ಭಾವಲಿಂಗಂ ನಿಷ್ಕಲಂ
ನಿರ್ದಿಷ್ಟಂ” ಏತಲ್ಲಿಂಗದ್ವಯೊಪಾಸನಾಭ್ಯಾಂ ಮುಕ್ತಿರಪಿ. ಶಂಕರವೇಣ್ಯೈವೋ
ಕ್ತತ್ವಾತ್ ಮನೋಗ್ರಾಹ್ಯಸ್ಯ ಪ್ರಾಣಲಿಂಗತ್ವೆ, ತತ್ಪ್ರಾಣೆಷ್ವಂತರ್ಮನಸೋ
ಲಿಂಗಮಿತಿ ಶ್ರುತಿವಾಕ್ಯಂ ಪ್ರಮಾಣಂ. ಉಕ್ತಂಚಾನುಭವಸೂತ್ರೇಪಿ, ನಿಷ್ಕಲಂ
ಭಾವಲಿಂಗಂಸ್ಯಾದ್ಭಾವ ಗ್ರಾಹ್ಯಂ ಪರಾತ್ಪರಂ” ಇತಿ, ಪ್ರಾಣಲಿಂಗಂ ಮನೋ
ಗ್ರಾಹ್ಯಂ ಭವೇತ್ಸಕಲನಿಷ್ಕಳಂ, ಇತಿಚ ||೧೪||

---

ಉಪಾಸಕನು ಉಭಯ ವಿಧವಾದ ಉಪಾಸನೆಯಂ ಮಾಡುತ್ತಿರುವುನೋ ಅವನು
ಸಗುಣೋಪಾಸನೆಯೆಂಬ ಅಗ್ನಿಯಿಂದ ಮರಣಾದಿಗಳಿಗೆ ಕಾರಣವಾದ ಮಲಗ
ಳೆಂಬ ಸೌದೆಗಳನ್ನು ದಹಿಸಿ, ನಿರ್ಗುಣೋಪಾಸನೆಯಿಂದ ಶಿವತ್ವವನ್ನೂ ಹೊಂದು
ವನು. ಈ ವಿಷಯದಲ್ಲಿ “ಹೃದಾಹೃದಿಸ್ಥಂ” ಭಾವಗ್ರಾಹ್ಯಂ” ಎಂಬ ಶ್ವೇತಾ
ಶ್ವತರೋಪನಿಷತ್ತೇ ಪ್ರಮಾಣವು. ಈ ಎರಡು ಶ್ರುತಿಗಳಲ್ಲಿ ಮೊದಲಿನ ಹೃದಾ
ಹೃದಿಸ್ಥಂ”ಎಂಬ ವಾಕ್ಯದಿಂದ ಸಗುಣವಾದ ಪ್ರಾಣಲಿಂಗವೂ, ಭಾವಾಗ್ರಾಹ್ಯ”
ಎಂಬ ವಾಕ್ಯದಿಂದ ನಿರ್ಗುಣವಾದ ಭಾವಲಿಂಗವೂ, ನಿರ್ದೇಶಿಸಲ್ಪಡುವುದು. ಅಂ
ದರೆಮನಸ್ಸಿನಿಂದ ಗ್ರಹಿಸಲ್ಪಡತಕ್ಕದ್ದು ಪ್ರಾಣಲಿಂಗವು. ಭಾವದಿಂದ ಗ್ರಹಿಸಲ್ಪಡ
ತಕ್ಕದ್ದು ಭಾವಲಿಂಗವು. ಇದಕ್ಕೆ “ತತ್ಪ್ರಾಣೇಷ್ವಂತರ್ಮನಸೋಲಿಂಗಂ” ಎಂಬುವ
ಶ್ರುತಿಯೂ ಕೂಡ ಆಧಾರವಾಗಿರುವುದಲ್ಲದೆ, ಅನುಭವಸೂತ್ರವೆಂಬ ಗ್ರಂಥದಲ್ಲಿ
ಸ್ಪಷ್ಟವಾಗಿ ನಿರೂಪಿಸಿರುವುರಾದಪ್ರಯುಕ್ತ ಸಗುಣ ನಿರ್ಗುಣೋಭಯವಿಧವಾದ
ಉಪಾಸನೆಯಂ ಸಮಕಾಲದಲ್ಲಿ ಮಾಡುವಾತನೇ ಮುಕ್ತಿಸುಖವನ್ನು ಹೊಂದುವ
ನು. ಇವುಗಳಲ್ಲಿ ಒಂದೊಂದನ್ನು ಬಿಟ್ಟು ಒಂದೊಂದರಉಪಾಸನೆಯಿಂದ ಆಯಾಯ
ಐಹಿಕಾಮುಷ್ಮಿಕಫಲಗಳುಂಟಾಗುವವಲ್ಲದೆ ನಿತ್ಯಸುಖವು ದೊರೆಯಲಾರದು|೧೪|

ಮೂ॥ ಹಿರಣ್ಮಯೇನ ಪಾತ್ರೇಣ ಸತ್ಯಸ್ಯಾಪಿ ಹಿತಂಮು
ಖಂ । ತತ್ವಂ ಪೂಷನ್ನಪಾವೃಣು ಸತ್ಯಧರ್ಮಾ
ಯದೃಷ್ಟಯೆ ॥೧೫॥

ಶಾಂ॥ ನಾಯಮಾತ್ಮಾಪ್ರವಚನೇನ ಲಭ್ಯೋನಮೇಧಯಾ ನಬಹುನಾ ಶ್ರುತೇನ ಯಮೇವೈಷವೃಣುತೆ ತೇನಲಭ್ಯಸ್ತಸ್ಯೈಷ ಆತ್ಮಾವಿವೃಣುತೇತನುಂ ಸ್ವಾಂ" ಇತಿಶ್ರುತೇಃ ಶಿವಲಿಂಗಧಾರಣಮಂತರಾ ಶಿವಸ್ಯಪ್ರವಚನಾದ್ಯಲಭ್ಯತ್ವಾತ್" ತದ್ಧಾರಣ ಪ್ರತಿಬಂಧಕಶಕ್ತಿ ಸಂಕೋಚಾಖ್ಯಾತ್ಯಾತ್ಮಕಾವರಣನಾಶಾಸಮರ್ಥಸ್ಸನ್ ಸ್ವಾಭಾವಿಕಾನಂತ ಶಕ್ತಿವಿಶಿಷ್ಟ ಪಶುಪಾಶನಿಯಾಮಕ ಸಕಲ ನಿಷ್ಕಳಸ್ಥೂಲಸೂಕ್ಷ್ಮ ಚಿದಚಿತ್ಪ್ರಪಂಚಪ್ರಕಾಶಕ ಸತ್ಯಜ್ಞಾನಾನಂತ ಕಲ್ಯಾಣ ಗುಣ ವಿಭವಾಶ್ರಯ ಭಕ್ತಿಚಿಂತಾಮಣಿಮೇವಶಿವಂ. ತದಾವರಣಾಪಸರಣಾಯ ಪ್ರಾರ್ಥಯತೆ ಹಿರಣ್ಮಯೆನೇತಿ–ಹಿರಣ್ಮಯಮಿವ ಹಿರಣ್ಮಯಂ ತೇಜೋರೂಪಂ, ತೇನ ಪಾತ್ರೇಣ- ಪಾತ್ರಸಮೇನ- ಕಾಮಾದ್ಯಾಶ್ರಯೇಣ. ಅಖ್ಯಾತ್ಯಾತ್ಮಕಾವರಣ ಸ್ವಭಾವಾಜ್ಞಾನ ಶಕ್ತಿವಿಶಿಷ್ಟ ಪಶ್ಚಿಮಚಕ್ರೇಣ "ಹಿರಣ್ಯಾಯನಮಃ" ಇತಿಶ್ರುತೇಃ, ಸಿದ್ಧಾಂತಾಗಮೆ. ಹಿರಣ್ಯಶಬ್ದಸ್ಯ ಅಜ್ಞಾನಶಕ್ತಿವಿಶಿಷ್ಟ ಪಶ್ಚಿಮಚಕ್ರಪರತ್ವೇನಾಸ್ಯಾ ಉಪಬೃಂಹಿತತ್ವಾತ್, ಸತ್ಯಸ್ಯ ಸೋಮಸ್ಯ ಪರಶಿವಸ್ಯ"

---

ಅರ್ಥ– ಹಿರಣ್ಮಯೇನ–ತೇಜೋರೂಪನಾದ, ಪಾತ್ರೇಣ–ಪಶ್ಚಿಮಚಕ್ರದಿಂದ, ಸತ್ಯಸ್ಯ–ಪರಶಿವನ, ಮುಖಂ–ನಿಷ್ಕಳವಾದ ಶರೀರವನ್ನು, ಅಪಿಹಿತಂ–ಆವರಿಸಿದ, ತತ್–ಶಕ್ತಿ ಸಂಕೋಚರೂಪವಾದ ಅಜ್ಞಾನವನ್ನು, ಸತ್ಯಧರ್ಮಾಯ–ಸತ್ಯ ಇಷ್ಟಲಿಂಗರೂಪನಾದ ಶಿವನ, ಧರ್ಮಾಯ–ಧಾರಣೆಯುಳ್ಳನನ್ನ, ದೃಷ್ಟಯೆ–ಸರ್ವಜ್ಞತ್ವಾದಿಗಳ ಲಾಭಕ್ಕೋಸ್ಕರವಾಗಿ, ಹೇಪೂಷನ್–ಭಕ್ತಪೋಷಕನಾದ ಪರಶಿವನೇ, ತ್ವಂ–ನೀನು, ಅಪಾವೃಣು–ನಾಶಮಾಡು.

ತಾ॥ ಉಪಾಸಕನು ನಾಲ್ಕು ವೇದಗಳನ್ನು ಅಭ್ಯಾಸಮಾಡಿದ್ದರೂ ವೇದಾರ್ಥವನ್ನು ತಿಳಿಯತಕ್ಕ ಸಾಮರ್ಥ್ಯದಿಂ ಕೂಡಿದ ಬುದ್ಧಿಯುಳ್ಳವನಾದರೂ ಚತುಶ್ಶಾಸ್ತ್ರಗಳನ್ನು ಅಧ್ಯಯನಮಾಡಿದ್ದರೂ ಶಿವಲಿಂಗಧಾರಣ ಒಂದಿಲ್ಲವಾದರೆ (ನಾಯಮಾತ್ಮಾ) ಎಂಬ ಶ್ರುತ್ಯನುಸಾರವಾಗಿ ಮುಕ್ತಿಯನ್ನು ಪಡೆಯಲಾರನು. ಮುಕ್ತಿಗೋಸ್ಕರ ಲಿಂಗಧಾರಣೆಯಲ್ಲಿ ಕುತೂಹಲವುಳ್ಳವನಾಗಿದ್ದರೂ ಅದಕ್ಕೆ ಪ್ರತಿ



ಮುತಂಸತ್ಯಂ ಪರಂಬ್ರಹ್ಮ ಪುರುಷಂ ಕೃಷ್ಣಪಿಂಗಲಂ । ಊರ್ಧ್ವರೇತಂ ವಿರೂಪಾಕ್ಷಂ ವಿಶ್ವರೂಪಾಯವೈನಮೋನಮಃ" ಇತಿಶ್ರುತೇಃ. ಮುಖಮಿತಿ ಶರೀರೋಪಲಕ್ಷಣಂ, ಭಕ್ತೋದ್ಧರಣಾರ್ಥಂ ಲೀಲಾಧೃತ ಭಾವಲಿಂಗರೂಪಂ ನಿಷ್ಕಳಶರೀರಂ" ಹಿರಣ್ಯಲಿಂಗಾಯನಮಃ" ಇತಿಶ್ರುತೇಃ." ಹಿರಣ್ಮಯೇಪರೆ ಕೋಶೆ ವಿರಜಂ ಬ್ರಹ್ಮನಿಷ್ಕಲಂ ತಚ್ಛುಭ್ರಂ ಜ್ಯೋತಿಷಾಂ ಜ್ಯೋತಿಃ ತದ್ಯದಾತ್ಮವಿದೋವಿದುರಿತಿ ಚಶ್ರುತೇಃ, ಅಪಿಹಿತಂ, ಆವೃತಂ. ತತ್ ಆವರಣ ಸ್ವಭಾವಶಕ್ತಿ ಸಂಕೋಚಾಖ್ಯಾತ್ಯಾತ್ಮಕಂ, ಹೆಪೂಷನ್. ಹೆಸ್ವಭಕ್ತಪೋಷಕಶಿವ, ತ್ವಂ, ಅಪಾವೃಣು, ಅಪಸಾರಯ. ತತ್ಸಂಕೋಚ ದಶಾಂವಿಗಮಯ್ಯ ವಿಕಾಸಂಕುರ್ವಿತ್ಯರ್ಥಃ. ಕಸ್ಯಾವರಣನಾಶಂ ಕಿಮರ್ಥಂ ವಾ ತತ್ಕುರ್ಯಾದಿತ್ಯತ್ರಾಹ. ಸತ್ಯಧರ್ಮಾಯೇತಿ, ಸತ್ಯಸ್ಯ ಶಿವಲಿಂಗಸ್ಯೇಷ್ಟರೂಪಸ್ಯ, ಧರ್ಮೋ ಧಾರಣಂ, ಯಸ್ಯಸೋಹಂ ತಸ್ಮೈ ಇತಿ. ಷಷ್ಠ್ಯರ್ಥೆ ಚತುರ್ಥೀ. ಸತ್ಯಧರ್ಮಸ್ಯ, ಶಿವಲಿಂಗಧಾರಿಣೊ ಮಮ ದೃಷ್ಟಯೆ. ಸರ್ವಜ್ಞತ್ವಾದಿ ಷಡಂಗಾಯ ಸ್ವಶಕ್ತಿಸಂಕೋಚ ಪ್ರಯುಕ್ತ ಕಿಂಚಿಜ್ಞತ್ವಾದಿಕಂ ನಿರಸ್ಯ, ತದ್ವಿಕಾಸದಶೋಚಿತ ಸರ್ವಜ್ಞತ್ವ ನಿತ್ಯತೃಪ್ತತ್ವಾನಾದಿ ಬೋಧತ್ವ ಸ್ವತಂತ್ರತ್ವಾಲುಪ್ತಶಕ್ತಿತ್ವಾನಂತಶಕ್ತಿತ್ವ ರೂಪಾಯ. ಏತದ್ಧರ್ಮಲಾಭಾಯೇತ್ಯರ್ಥಃ. ॥೧೫॥

---

ಬಂಧಕವಾದ ಶಕ್ತಿಸಂಕೋಚರೂಪವಾದ ಅಜ್ಞಾನವನ್ನು ನಾಶಮಾಡಿಕೊಳ್ಳಲು ಶಕ್ತಿಯಿಲ್ಲದುದರಿಂದ ಅಜ್ಞಾನಾಂಧಕಾರವನ್ನು ತೊಲಗಿಸುವುದರಲ್ಲಿ ಸೂರ್ಯಪ್ರಾಯನಾಗಿರುವ, ಸ್ವಾಭಾವಿಕಗಳಾದ, ಅನೇಕ ಶಕ್ತಿಗಳಿಂದೊಡಗೂಡಿರುವ, ಬ್ರಹ್ಮಾದಿಗಳೆಂಬ ಪಶುಗಳ ಪಾಶಕ್ಕೆ ನಿಯಾಮಕನಾಗಿರುವ, ಸಕಲರೂಪವಾದ ಸ್ಥೂಲಪ್ರಪಂಚವನ್ನೂ ನಿಷ್ಕಲಪ್ರಪಂಚವನ್ನೂ ಪ್ರಕಾಶಪಡಿಸುವ, ಸತ್ಯ ಜ್ಞಾನ ಮೊದಲಾದ ಅನಂತ ಕಲ್ಯಾಣಗುಣಾಕರನಾದ, ಸ್ವಭಕ್ತಚಿಂತಾಮಣಿಯಾದ ಪರಶಿವನನ್ನು ಭಕ್ತನು ಪ್ರಾರ್ಥಿಸುವನು. ಅದೆಂತೆಂದೊಡೆ; ಎಲೈಸ್ವಭಕ್ತಪೋಷಕನಾದ ಪರಶಿವನೇ! ನಾನು ಇಷ್ಟಲಿಂಗಧಾರಣೆಯುಳ್ಳವನಾಗಿ, ಗುರೂಪದಿಷ್ಟಮಾರ್ಗಾನುಸಾರವಾಗಿ, ಅಂತರ್ಲಿಂಗಾನುಸಂಧಾನತತ್ಪರನಾಗಿದ್ದರೂ, ಆ ಅನುಸಂಧಾನರೂಪವಾದ ಧ್ಯಾನವು, ಅಜ್ಞಾನರೂಪವಾದ ಮಲವಿರುವವರಿವಿಗೂ ಭಾವಲಿಂಗವನ್ನು ವಿಷಯೀಕರಿಸಿಕೊಳ್ಳದಿರುವುದರಿಂದ, ಆ ಭಾವಲಿಂಗ ಸಾಕ್ಷಾತ್ಕಾರವಾಗುವವರಿವಿಗೂ ನನ್ನಲ್ಲಿರುವ ಸರ್ವಜ್ಞತ್ವಾದಿ ಧರ್ಮವು ಪ್ರಕಾಶವಾಗುವುದಿಲ್ಲವು.

ಮೂ॥ ಪೂಷನ್ನೇಕರ್ಷೇ ಯಮ ಸೂರ್ಯ ಪ್ರಾಜಾಪತ್ಯ
ವ್ಯೂಹರಶ್ಮೀನ್ಸಮೂಹ । ತೇಜೋಯತ್ತೇರೂಪಂ
ಕಲ್ಯಾಣತಮಂ ತತ್ತೇ ಪಶ್ಯಾಮಿಯೋಽಸಾವಸೌ
ಪುರುಷಸ್ಸೋಽಹಮಸ್ಮಿ ॥೧೬॥

ಶಾಂ॥ ಹೃತ್ಪುಂಡರೀಕಾಭ್ಯಂತರಸ್ಥ ಕಲ್ಯಾಣತಮ ಪ್ರಾಣಲಿಂಗದಿದೃಕ್ಷುಸ್ಸನ್ ಗುರೂಪದಿಷ್ಟ ತದ್ದರ್ಶನೋಪಾಯಾನುಷ್ಠಾನೇ ಕೃತಪ್ರಯತ್ನೋಪಿ ಜ್ಯೋತಿರ್ಲಿಂಗದರ್ಶನಾಭಾವಾತ್, ಉಪಾಯಾನುಷ್ಠಾನಮಪಿ. ಸರ್ವಶಕ್ತ ಶಿವಪ್ರಸಾದ ಮಂತರಾ ನ ಭವತೀತಿ ಮತ್ವಾ, ತತ್ತದಿಂದ್ರಿಯದ್ವಾರೇಣ ಪ್ರಸರಚ್ಚಿತ್ತರಶ್ಮೀನ್ ಶಕ್ತೀನ್ ಸಂಕುಚಿತಾನ್ ಕುರ್ವಿತಿ ಪ್ರಾರ್ಥಯತೆ ಪೂಷನ್ನಿತ್ಯಾದಿನಾ—ಪುಷ್ಣಾತೀತಿಪೂಷಾ ತತ್ಸಂಬುದ್ಧೌ ಹೆಪೂಷನ್. ಸರ್ವಭಕ್ತಪೋಷಕ,

---

ಆದಕಾರಣ ಎಲೈ ದಯಾನಿಧಿಯೇ! ಅನುಸಂಧಾನದಲ್ಲಿ ವಿಷಯವಾಗಿರುವ ಭಾವಲಿಂಗ ಸಾಕ್ಷಾತ್ಕಾರಕ್ಕೆ ಪ್ರತಿಬಂಧವನ್ನುಂಟುಮಾಡುತ್ತಿರುವ ಅಜ್ಞಾನ ಶಕ್ತಿಯನ್ನು ಹೋಗಲಾಡಿಸಿ ನನ್ನನ್ನು ಉದ್ಧರಿಸು. ॥೧೫॥

ಅರ್ಥ— ಹೆ ಪೂಷನ್—ಭಕ್ತರನ್ನು ಪೋಷಿಸುತ್ತಿರುವ ಎಲೈ ಶಿವನೇ, ಹೆ ಏಕರ್ಷೆ—ಮುಖ್ಯ ಚೈತನ್ಯವಿಶಿಷ್ಟನಾದ ಎಲೈ ಶಿವನೇ, ಹೇ ಯಮ—ಎಲೈ ನಿಖಿಲಪ್ರಾಣಿಗಳಿಗೆ ಪ್ರೇರಕನೇ, ಹೇ ಸೂರ್ಯ—ಜ್ಞಾನಿಪುರುಷರಿಂದ ತಿಳಿಯಲ್ಪಡತಕ್ಕವನೇ, ಹೇ ಪ್ರಾಜಾಪತ್ಯ—ಚತುರ್ಮುಖ ಬ್ರಹ್ಮನಿಗೆ ಆದಿಯಲ್ಲಿ ವೇದೋಪದೇಶವಂ ಮಾಡಿದವನೆ, ರಶ್ಮೀನ್—ಚಿತ್ತಶಕ್ತಿಗಳನ್ನು, ವ್ಯೂಹ—ನಿನ್ನ ಅಭಿಮುಖಗಳನ್ನಾಗಿ ಮಾಡು. ಕಿಂಚ—ಮತ್ತು, ಸಮೂಹ—ಒಂದುಕಡೆಯಲ್ಲಿ ಶೇರಿಸು, ಯತ್—ಯಾವ, ತೆ—ನಿನ್ನ, ತೇಜಃ—ತೇಜೋಮಯವಾದ, ರೂಪಂ—ಜ್ಯೋತಿರ್ಲಿಂಗವು, ಕಲ್ಯಾಣತಮಂ—ಅತಿಶಯ ಶುಭಾಸ್ಪದವಾದುದೊ; ತೆ—ಆ ನಿನ್ನ, ತತ್—ಆ ಪ್ರಾಣಲಿಂಗವನ್ನು, ಪಶ್ಯಾಮಿ—ನೋಡುವೆನು. ಯಃ ಅಸೌ ಪುರುಷಃ—ಸ್ಥೂಲಾದಿ ಮೂರು ಶರೀರಗಳಲ್ಲಿರುವ ಇಷ್ಟಾದಿರೂಪನಾದ ಯಾವ ಶಿವನುಂಟೋ, ಸೋಽಹಮಸ್ಮಿ—ಅವನೇ ನನ್ನ ಸ್ವರೂಪವೆಂದು ನೋಡುತ್ತೇನೆ.

ತಾ॥ ಹೃದಯಪುಂಡರೀಕದಲ್ಲಿರುವ ಮಂಗಳಮೂರ್ತಿಯಾದ ಪ್ರಾಣಲಿಂಗವನ್ನು ಸಾಕ್ಷಾತ್ಕರಿಸಬೇಕೆಂದಪೇಕ್ಷಿಸಿ, ಆ ಪ್ರಾಣಲಿಂಗೋಪಾಸನೆಗೋಸ್ಕರ ವಿಶೇಷವಾದ ಪ್ರಯತ್ನವನ್ನು ಮಾಡಿದರೂ ಸರ್ವಶಕ್ತನಾದ ಪರಮಾತ್ಮನ



ಏಕಶ್ಚಾಸೌ ಋಷಿಶ್ಚ ಏಕರ್ಷಿಃ, ತತ್ಸಂಬುದ್ಧೌ ಹೆಏಕರ್ಷೇ. ಮುಖ್ಯಚೈತನ್ಯಶಕ್ತಿವಿಶಿಷ್ಟ, ಯಮ ಯಮಯತಿ ಸರ್ವಮಿತಿ ಯಮಃ, ಯೋಂತರೊ ಯಮಯತಿ" ಇತಿಶ್ರುತೇಃ. ಹೆ ಯಮ ಸರ್ವಪ್ರಾಣಿಪ್ರೇರಕ, ಸೂರ್ಯ. ಸೂರ್ಯವದ್ದೇದೀಪ್ಯಮಾನ. ಅಥವಾ ಸೂರಿಭಿರ್ವಿಜ್ಞೇಯತ್ವಾತ್ಸೂರ್ಯಃ ಸೂರಿಶಬ್ದಾತ್ತದ್ಧಿತೋಯತ್, ಯಸ್ಯೇತಿಚೇತಿ ಇಕಾರಲೋಪಃ, ಹೇಪ್ರಾಜಾಪತ್ಯ. ಪ್ರಜಾನಾಂ ಪತಿಃ ಪ್ರಜಾಪತಿಶ್ಚತುರ್ಮುಖಃ. ತಸ್ಯಪ್ರಥಮಪುತ್ರಸ್ಯ ವೇದೋಪದೇಷ್ಟೃತ್ವೇನ ಪ್ರಿಯ, ತಸ್ಮೈ ಪ್ರಥಮಪುತ್ರಾಯೇತ್ಯಾದಿನಾ ತಸ್ಯ ವೇದೋಪದೇಷ್ಟೃತ್ವಸ್ಯ ಸಿದ್ಧಾಂತಶಿಖಾಮಣೌ ಪ್ರಸಿದ್ಧತ್ವಾತ್" ಯೊಬ್ರಹ್ಮಾಣಂ ವಿದಧಾತಿಪೂರ್ವಂ ತಸ್ಮೈವೇದಾಂಶ್ಚ ಪ್ರಹಿಣೋತೀತಿ" ಶ್ರುತೇಃ ರಶ್ಮೀನ್. ಮಚ್ಚಿತ್ತರಶ್ಮೀನ್. ತತ್ತದಿಂದ್ರಿಯದ್ವಾರೇಣ ತತ್ತದ್ವಿಷಯದೇಶಂ ಗಚ್ಛತಃ. ಚಿತ್ತಶಕ್ತಿರೂಪಾನ್ ರಶ್ಮೀನ್. ವ್ಯೂಹ. ವಿಗಮಯ. ಸ್ವಕಾರಣಾಭಿಮುಖಾನ್ ಕುರ್ವಿತ್ಯರ್ಥಃ. ಕಿಂಚ

---

ಅನುಗ್ರಹವಿಲ್ಲದೆ ಆ ಪ್ರಯತ್ನಗಳೆಲ್ಲವೂ ವ್ಯರ್ಥವಾಗುವುದೆಂದು ಯಥಾರ್ಥವಾದ ಅಭಿಪ್ರಾಯವನ್ನು ತಿಳಿದು, ಚಕ್ಷುರಾದಿ ಸಕಲೇಂದ್ರಿಯಗಳ ಮಾರ್ಗವಾಗಿ ಹೊರಟುಹೋಗುತ್ತಿರುವ ನನ್ನ ಚಿತ್ತವೃತ್ತಿಗಳೆಂಬ ಶಕ್ತಿಗಳನ್ನು ನಿರೋಧಿಸಿ, ಹೃದಯಕಮಲದ ಮಧ್ಯದಲ್ಲಿ ದೇದೀಪ್ಯಮಾನನಾಗಿ ಹೊಳೆಯುವ ಪ್ರಾಣಲಿಂಗದ ಅಭಿಮುಖಗಳನ್ನಾಗಿ ಮಾಡೆಂದು ಸಾಧಕನಾದ ಭಕ್ತನು ಈ ಮಂತ್ರದಲ್ಲಿ ಶಿವನನ್ನು ಈ ರೀತಿಯಾಗಿ ಪ್ರಾರ್ಥಿಸುವನು.

ಸ್ವಭಕ್ತಪೋಷಣೆಯಂ ಮಾಡುವುದರಲ್ಲಿ ಬದ್ಧಾದರನಾಗಿಯೂ, ಜ್ಞಾನಮಯಮೂರ್ತಿಯಾಗಿಯೂ, ಸರ್ವಪ್ರಾಣಿಗಳನ್ನು ಅವರವರ ಕರ್ಮಾನುಗುಣವಾಗಿ ಆಯಾಯ ಕರ್ಮಗಳಲ್ಲಿ ನಿಯಮಿಸುವ ಸ್ವಭಾವ ಉಳ್ಳವನಾಗಿಯೂ ಇರುವ ಭಕ್ತವತ್ಸಲನೆಂಬ ಬಿರುದನ್ನು ಹೊಂದಿದ ಎಲೈ ಶಂಕರನೇ! ನೀನು (ಯೋ ಬ್ರಹ್ಮಾಣಂ) ಎಂಬ ಉಪನಿಷತ್ತಿನಲ್ಲಿ ಹೇಳಿದಪ್ರಕಾರ, ನಿನ್ನ ಜ್ಯೇಷ್ಠಪುತ್ರನಾದ ಆ ಚತುರ್ಮುಖ ಬ್ರಹ್ಮನಿಗೆ ಲೋಕೋಪಕಾರಕ್ಕೋಸ್ಕರ ನಿನ್ನಿಂದ ಉಪದೇಶಮಾಡಲ್ಪಟ್ಟ ಋಗ್ಯಜುಸ್ಸಾಮಾದಿ ವೇದಗಳ ಸಾಧನೆಗಳಿಂದ ಜಗತ್ತನ್ನು ಉದ್ಧಾರಮಾಡಿದಿಯೊ; ಅಂಥಾ ಚತುರ್ಮುಖ ಬ್ರಹ್ಮನಲ್ಲಿ ಅತ್ಯಂತ ಪ್ರೀತಿಯುಳ್ಳ ಎಲೈ ಸಾಂಬಮೂರ್ತಿಯೆ! ನನ್ನ ಅಂತಃಕರಣದ ಶಕ್ತಿಗಳೆಲ್ಲವೂ ಪ್ರತಿಕ್ಷಣದಲ್ಲಿಯೂ ಕಣ್ಣು ಮೂಗು ಮುಂತಾದ ಇಂದ್ರಿಯಗಳ ದ್ವಾರಗಳಿಂದ

ತಾಕ್ ಸಮೂಹ. ಏಕೀಕುರು. ಉಕ್ತಂಚ ಶಕ್ತಿಸಂಕೋಚಸ್ಯ ಸ್ವರೂಪಸಾಕ್ಷಾತ್ಕಾರಾರ್ಜಕ ಮಧ್ಯವಿಕಾಸೋಪಾಯತ್ವಂ ಶಕ್ತಿಸೂತ್ರೇ, ವಿಕಲ್ಪಕ್ಷಯ ಶಕ್ತಿಸಂಕೋಚ ವಿಕಾಸ ವಾಹಚ್ಛೇದಾದ್ಯಂತಕೋಟಿ ನಿಭಾಲನಾದಯ ಇಹೋಪಾಯಾಃ'' ಇತಿ. ಯತ್ತೇತೇಜೋರೂಪಂ ಜ್ಯೋತಿರ್ಲಿಂಗರೂಪಂ ಕಲ್ಯಾಣತನುಂ ಪರಮಮಂಗಳ ಮುಪಾಸಕಾನಾಂ ಭುಕ್ತಿಮುಕ್ತಿಪ್ರದತ್ವಾತ್, ಅಸ್ತಿತೇಶವ. ತತ್ ಪ್ರಾಣಲಿಂಗಂ ಮಂಗಳಶರೀರರೂಪಂ'' ಯಾತೇರುದ್ರಶಿವಾತನೂ ರಘೋಽಪಾಪಕಾಶಿನೀ'' ಇತಿಶ್ರುತೇಃ, ಪಶ್ಯಾಮಿ ತವಪ್ರಸಾದಾತ್. ಸಾಕ್ಷಾತ್ಕರೋಮಿ ನತ್ವಹಂ ಮದ್ಭಿನ್ನತಯಾ ಘಟಾದಿವತ್ಸಾಕ್ಷಾತ್ಕರೋಮಿ. ಕಿಂತು ಯೋಸೌ ಗುರೂಪದಿಷ್ಟ ''ಸೂರ್ಯೇಂದೂಜ್ವಲವಹ್ನಿಮಂಡಲಗತಃ'' ಯೋಸೌಪುರುಷಃ. ಪುರಿ ಸ್ಥೂಲಾದಿ ಶರೀರತ್ರಯೆ ಶೇತೆ ಇತಿಪುರುಷಃ, ಇಷ್ಟಪ್ರಾಣಭಾವಾಪರ ಪರ್ಯಾಯ ಗುರು ಲಿಂಗ ಜಂಗಮರೂಪಶ್ಚ ಸೋಹಮಸ್ಮೀತಿ, ಸೂರ್ಯಾದಿ

---

ಹೊರಗೆ ಹೋಗುವವು. ಇದರಿಂದ ಅನೇಕ ವಿಧವಾದ ಭವಚಕ್ರಗಳಲ್ಲಿ ಬಿದ್ದುಕೊಂಡು ವಿಶ್ರಾಂತಿ ಸುಖವನ್ನೇ ಕಾಣದೆ ಘೋರಾರಣ್ಯವನ್ನು ಪ್ರವೇಶಿಸಿ ಘಾತುಕ ಮೃಗಗಳ ಬಾಧೆಗೆ ಸರಳುತ್ತಿರುವ ಮನುಷ್ಯನಂತೆ, ಕಾಮಕ್ರೋಧಾದಿಗಳಿಂದ ಹಿಡಿಯಲ್ಪಟ್ಟು, ಹೇಳಲಶಕ್ಯವಾದ ದುಃಖಗಳನ್ನು ಅನುಭವಿಸುತ್ತಿರುವೆನು. ಪರಮ ಕೃಪಾನಿಧಿಯಾದ ಮಹಾದೇವನೇ ಇಂದ್ರಿಗಳ ದ್ವಾರಾಹೊರಗೆ ಹೊರಡುತ್ತಿರುವ ನನ್ನ ಅಂತಃಕರಣ ವೃತ್ತಿಗಳನ್ನೆಲ್ಲಾ ಹೊರಗೆ ಹೋಗದಂತೆ ಅಲ್ಲಿಯೇ ತಡೆದು, ಹೃದಯಾಬ್ಜಪೀಠಾರೂಢನಾಗಿರುವ ಆನಂದಘನನಾದ ನಿನ್ನ ಪ್ರಾಣಲಿಂಗದಲ್ಲಿಯೇ ಶೇರುವಂತೆ ಮಾಡು. ಅಂದರೆ ನನ್ನ ಚಿತ್ತವೃತ್ತಿಗಳೆಲ್ಲವು ನಿನ್ನ ಆಕೃತಿಯುಳ್ಳವುಗಳಾಗುವಂತೆ ಮಾಡು. ಅನೇಕ ರಂಧ್ರಗಳುಳ್ಳ ಮಡಿಕೆಯಲ್ಲಿ ತುಂಬಿದ ಸ್ವಚ್ಛವಾದ ನೀರು ಅನೇಕಪ್ರಕಾರವಾಗಿ ಸುತ್ತಲೂ ಹೇಗೆ ಚಲ್ಲುವುದೋ ಅದರಂತೆ ಅನೇಕ ಪ್ರಕಾರ ಚದರಿಹೋದ ನನ್ನ ಚಿತ್ತದ ಶಕ್ತಿರೂಪವಾದ ಕಿರಣಗಳೆಲ್ಲವನ್ನೂ ಆಚೆಗೆ ಈಚೆಗೆ ಹೋಗದಂತೆ ಒಟ್ಟುಗೂಡಿಸಿ ನನ್ನನ್ನು ಅದ್ವಿತೀಯ ಬ್ರಹ್ಮಾಕಾರನನ್ನಾಗಿ ಮಾಡು. ಅಂದರೆ ಬಾಹ್ಯದಲ್ಲಿ ಇದು ಘಟವು, ಇದು ಪಟವು, ಇದು ಕುಡ್ಯವು, ಇದು ಹಾಗೆ, ಅದು ಹೀಗೆ ಎಂದು ಭಿನ್ನಭಿನ್ನ ಆಕಾರವನ್ನು ಹೊಂದಿದ ನನ್ನ ಚಿತ್ತದ ವೃತ್ತಿಗಳನ್ನೆಲ್ಲಾ ದೀಪದ ಕಾಂತಿಯಿಂದ ಅಂಧಕಾರವೆಲ್ಲವು ಓಡಿಹೋಗುವಂತೆ ಓಡಿಸಿ, ಸ್ಥಾವರಜಂಗ



ಮಂಡಲಗತಶ್ಚ ಶ್ರೀಗುರ್ವಭಿವ್ಯಕ್ತಸ್ಥೂಲಾದಿ ಶರೀರಗಶ್ಚೈಕ ಏವೇತಿ ಮತ್ವಾ ಸೋ ಮಸ್ಮೀತಿ ಮತ್ಸ್ವರೂಪಂ ಪಶ್ಯಾಮಿತ್ಯರ್ಥಃ ಉಕ್ತಂಚಶ್ಶೈವಶಾಸ್ತ್ರೆ ''ಹೃತ್ಪದ್ಮಂ ಶಿವಧರ್ಮಕಂದಸಹಿತಂ ಸುಜ್ಞಾನನಾಳಂ ತಥಾ | ನಿತ್ಯೈಶ್ವರ್ಯದಳಾಷ್ಟಕಂ ಶಶಿನಿಭಂ ವೈರಾಗ್ಯ ಸತ್ಕರ್ಣಿಕಂ | ಶ್ರೀರುದ್ರೇಶ್ವರಕೇಸರಾಂಚಿತಮಿದಂ ಸಂಚಿಂತ್ಯ ತನ್ಮಧ್ಯಮೆ. ಸೂರ್ಯೇಂದೂಜ್ವಲವಹ್ನಿಮಂಡಲ ಗತಂಧ್ಯಾಯೇ ಶಿವಂಚಿನ್ಮಯಮಿತಿ. ||೧೬||

ಮೂ॥ ವಾಯು ರನಿಲ ಮಮೃತಮಥೇದಂ ಭಸ್ಮಾಂತಂ
ಶರೀರಂ। ಓಂ ಕ್ರತೋ ಸ್ಮರ ಕೃತಗ್ ಸ್ಮರ ಕ್ರತೋ
ಸ್ಮರ ಕೃತಗ್ ಸ್ಮರ ॥೧೭॥

---

ಮಾತ್ಮಕವಾದೀ ಪ್ರಪಂಚದಲ್ಲೆಲ್ಲಾ (ಸರ್ವೋವೈರುದ್ರಃ) ಎಂಬ ಶ್ರುತ್ಯುಕ್ತಿಯಂತೆ ಶಿವತ್ವಬುದ್ಧಿಯುಂಟಾಗುವಂತೆ ಮಾಡು. ಮತ್ತು ವ್ಯವಧಾನವಿಲ್ಲದೆ ಆ ಸರ್ವಾತ್ಮಕನಾದ ಶಿವನೇ ನಾನೆಂಬ ಶಿವಾದ್ವೈತಾಕಾರಜ್ಞಾನವನ್ನುಂಟುಮಾಡು. ಮತ್ತು ಈ ಮಂತ್ರದಲ್ಲಿ ಹೇಳಿದ ವ್ಯೂಹ ಪದದಿಂದ ಹೇಳಲ್ಪಟ್ಟ ಶಕ್ತಿಸಂಕೋಚವೆಂಬುಪಾಯವು, ಸಮೂಹವೆಂಬ ಪದದಿಂದ ಹೇಳಲ್ಪಟ್ಟ ಶಕ್ತಿವಿಕಾಸವೆಂಬ ಯೋಗೋಪಾಯವು ಇವು ಮೊದಲಾದವುಗಳೆಲ್ಲವೂ ದಯಾನಿಧಿಯಾದ ಪರಶಿವಲಿಂಗವೆ ನಿನ್ನ ಅನುಗ್ರಹವಿದ್ದರೇನೆ ನನಗೆ ಸಾಧ್ಯಗಳಾಗುವುವು. ಈ ಯೋಗೋಪಾಯಗಳ ಸಾಧನೆಯಿಂದ ಸೂರ್ಯ ಚಂದ್ರ ವಹ್ನಿ ಇವುಗಳ ಮಂಡಲ ಮಧ್ಯದಲ್ಲಿರುವ ತೇಜೋರೂಪನಾದ ಶಿವನೇ ನಾನಾಗಿ, ಸ್ಥೂಲ ಶರೀರವನ್ನು ಹೊಂದಿದ ಇಷ್ಟಲಿಂಗವು ನನ್ನ ಸ್ವರೂಪವೆಂತಲೂ, ಸೂಕ್ಷ್ಮಶರೀರವನ್ನು ಹೊಂದಿದ ಪ್ರಾಣಲಿಂಗವೂ ನನ್ನ ಸ್ವರೂಪವೆಂತಲೂ, ಕಾರಣ ಶರೀರವನ್ನು ಹೊಂದಿದ ಭಾವಲಿಂಗವು ನನ್ನ ಸ್ವರೂಪವೆಂತಲೂ, ಧಾರಾವಾಹಿಯಾದ ಅಂದರೆ ಕಡದೆ ಒಂದೇವಿಧವಾದ ಜ್ಞಾನವುಳ್ಳವನಾಗಿ ಪರಮಮಂಗಲ ಸ್ವರೂಪವಾದ ಜ್ಯೋತಿರ್ಲಿಂಗ ಸಾಕ್ಷಾತ್ಕಾರವಂ ಪಡೆದು ಮುಕ್ತನೆಂದೆನಿಸುವೆನು. ಕಪಿಗಳ ವ್ಯಾಪಾರಗಳಂತೆ ಅತಿ ಚಂಚಲವಾದ ನನ್ನ ಮನೋವೃತ್ತಿಗಳೆಲ್ಲವನ್ನು ನಿನ್ನ ಸ್ವರೂಪವಾದ ಪ್ರಾಣಲಿಂಗದಲ್ಲಿ ನೆಲೆಗೊಳಿಸಿ, ನನ್ನಲ್ಲಿ ಅನುಗ್ರಹಮಾಡು ಎಂದು ಭಕ್ತಪ್ರಾರ್ಥನಾಪರವಾಗಿ ಶಾಂಕರೀಕಾರರಿಂದ ಬರೆಯಲ್ಪಟ್ಟ ಈ ಮಂತ್ರದ ವ್ಯಾಖ್ಯಾನದ ಸಂಕ್ಷಿಪ್ತ ಅಭಿಪ್ರಾಯವು. ||೧೬||

ಶಾಂ|| ಅಥೇದಾನೀಂ ಲಿಂಗಾಂಗಿನಃ ಶಿವಯೋಗಿನೋಽಭ್ಯಾಸಕ್ರಮಂ ನಿರೂಪಯತಿ ವಾಯುರಿತ್ಯಾದಿನಾ—ವಾಯುರಿತಿಪದಂ ಪಂಚಭೂತೋಪಲಕ್ಷಣಾರ್ಥಮನಿಲ ಮಮೃತಂ ಸೂತ್ರಾತ್ಮಕಂ ಸರ್ವಾಂತರ್ಯಾಮಿ ಶಿವಲಿಂಗಂ ಶಿವಲಿಂಗಾಯಾರ್ಪಿತಂ ಭೂಯಾತ್. ಚತುರ್ಥ್ಯರ್ಥೇದ್ವಿತೀಯಾ" ತತ್ಸೂತ್ರೇಣ ವಾಯುನಾಹಿಗೌತಮ" ಇತಿಶ್ರುತೇಃ. ಲಿಂಗಂ ಪರಂ ಹೃದ್ಗಗನಂ ಪ್ರಾಣಾನಿಲೋಯಂ ಶಿವಸೂತ್ರಮುಚ್ಯತೇ" ಇತ್ಯನುಭವಸೂತ್ರೋಕ್ತೇಶ್ಚ, ಅಯಮತ್ರಾಶಯಃ. ಪೃಥಿವ್ಯಪ್ತೇಜೋ ವಾಯ್ವಾಕಾಶಾತ್ಮಕ ಪಂಚಭೂತಾನಿ, ನಮದೀಯಾನಿ, ಕಿಂತು ತತ್ತದಧಿಷ್ಠಿತಾಚಾರ ಗುರುಶಿವಚರ ಪ್ರಸಾದ ಲಿಂಗಾಯತ್ತಾನೀತಿ. ಆಚಾರಾದಿಲಿಂಗೆ ಪೃಥಿವ್ಯಾದ್ಯರ್ಪಣ ಬುದ್ಧಿದಾರ್ಢ್ಯಂ ಕುರ್ಯಾತ್. ಉಕ್ತಂಚ ಅನುಭವಸೂತ್ರೆ. ಆಚಾರಾಯಾರ್ಪಿತಾ ಪೃಥಿವೀ ಗುರೋರಾಪಸ್ಸಮರ್ಪಿತಾಃ | ಶಿವಾಯಚಾರ್ಪಿತಂತೇಜಶ್ಚರಾಯಮರುದರ್ಪಿತಃ || ಪ್ರಸಾದಾಯಾರ್ಪಿತಂ ವ್ಯೋಮ ಜೀವಾತ್ಮಾ ಮಹತೇರ್ಪಿತಃ" ಇತಿ. ಇತ್ಥಂ ವಿಶಕಲಿತರೂಪೇಣ

---

ಅರ್ಥ— ವಾಯು!—ವಾಯುಪದದಿಂದುಪಲಕ್ಷಿತಗಳಾದ ಪೃಥಿವ್ಯಾದಿ ಪಂಚಭೂತಗಳು, ಅಮೃತಂ—ಸತ್ಯವಾದ, ಅನಿಲಂ—ಶಿವಲಿಂಗಕ್ಕೋಸ್ಕರವೇ, ಅಥ—ಈ ರೀತಿಯಾಗಿ ಶಿವನಿಗೆ ಸಮರ್ಪಣೆಮಾಡಿದನಂತರ, ಇದಂ—ಕಾಣಿಸುತ್ತಿರುವ, ಶರೀರಂ—ಸ್ಥೂಲಸೂಕ್ಷ್ಮಾದಿ ಶರೀರಗಳೆಂಬ ಹವಿಸ್ಸು, ಭಸ್ಮಾಂತಂ—ಸುಟ್ಟು ಬೂದಿಯಾಗುವುದು. ಹೆಕ್ರತೊ—ಎಲೈ ಜೀವನೇ, ಕೃತಂ—ನಿನ್ನಿಂದನುಷ್ಠಿಸಲ್ಪಟ್ಟ ಕರ್ಮವು, ಸ್ಮರಸ್ಮರ—ಈಶ್ವರನಿಗೆ ಅರ್ಪಿಸಲ್ಪಟ್ಟಿತೆಂದು ಪುನಃ ಪುನಃ ಸ್ಮರಿಸು. ಹೆ ಕ್ರತೊ—ಎಲೈ ಜೀವನೆ! ಕೃತಂ—ಗುರು ಲಿಂಗ ಜಂಗಮರಿಗೋಸ್ಕರ ನಿನ್ನಿಂದ ಮಾಡಲ್ಪಟ್ಟ ಸಕಲ ಕರ್ಮವನ್ನೂ, ಸ್ಮರಸ್ಮರ—ಶಿವಾರ್ಪಿತವನ್ನಾಗಿ ಪದೇಪದೆ ಸ್ಮರಿಸು. ||೧೭||

ತಾ|| ಪೃಥಿವೀ, ಜಲ, ಅಗ್ನಿ, ವಾಯು, ಆಕಾಶಗಳೆಂಬ ಪಂಚಭೂತಗಳೂ ಇವುಗಳಲ್ಲಿ ಕ್ರಮದಿಂದಿರುವ ಗಂಧ, ರೂಪ, ಸ್ಪರ್ಶ, ಶಬ್ದಗಳೆಂಬ ಪಂಚವಿಷಯಗಳು ಇವುಗಳೆಲ್ಲವನ್ನೂ ಬಹುಕಾಲದಿಂದಲೂ ನನ್ನವೆಂದು ಅಭಿಮಾನಿಸಿಕೊಂಡು ಬಂದಿರುವ ಶರೀರಾಂತಃಪ್ರವಿಷ್ಟನಾದ ಆತ್ಮನು, ಮೇಲೆ ಹೇಳಿದ ಕರ್ಮ ಜ್ಞಾನ ಸಮುಚ್ಚಯರೂಪವಾದ ಲಿಂಗೋಪಾಸನೆಯದಾರ್ಢ್ಯದಿಂದ ಪರಿಪಕ್ವಾಂತಃಕರಣನಾಗಿ, ವಿಶ್ರಾಂತ ಕನಾದ ಶಿವನಲ್ಲಿ ಅಹಂಗ್ರಹೋಪಾಸನಾಸಿದ್ಧಿಯಿಂದ ಜೀವನು



ಭೂತಾರ್ಪಣ ಬುದ್ಧಿ ಮುಪದಿಶ್ಯ ತತ್ಸಮಷ್ಟ್ಯಾತ್ಮಕ ಸ್ಥೂಲಾದಿ ಶರೀರಾರ್ಪಣಮಪಿ ಕುರ್ಯಾದಿತ್ಯಾಹ, ಅಥೇದಮಿತ್ಯಾದಿನಾ, ಅಥ ಅನಂತರಂ. ಇದಂ ಚಕ್ಷುರಾದಿ ಗ್ರಾಹ್ಯಂ' ಶರೀರಂ ಸ್ಥೂಲಸೂಕ್ಷ್ಮಾದಿಶರೀರಂ ಹವೀರೂಪಂ ಯತ್ಪವರ್ತತೆ ತದ್ಭಸ್ಮಾಂತಂ ಶಿವಯೋಗಿನಃ ಪರಸ್ಮಿನ್ ಚಿದಗ್ನೌ ಹೂಯಮಾನಂ ಸತ್ ಭಸ್ಮಾಂತಮಿವ ಭೂಯಾತ್. ಭಸ್ಮೇವಾಂತಃ ಪರಿಣಾಮೋಯಸ್ಯ ತತ್ಕಾಷ್ಠಾದಿಕಂ ಅಗ್ನ್ಯರ್ಪಿತಂ ಯಥಾಕಾಷ್ಠತ್ವಾದಿನಾ ಪೂರ್ವರೂಪೇಣ ಚಾಕ್ಷುಷಾದ್ಯಗೋಚರಂಭವತಿ. ಯಥಾಚಶಿಖಿಕರ್ಪೂರ ಯೋಗಾನಂತರಂ ಶಿಖಾವದಗ್ನ್ಯರ್ಪಿತಕರ್ಪೂರಸ್ಯ ಭಸ್ಮಾಂತತ್ವಂ (ಕರ್ಪೂರತ್ವೇನಪ್ರತೀತ್ಯವಿಷಯತ್ವಂ) ತಥಾ ಶರೀರತ್ರಯಸ್ಯೇಷ್ಟಾದಿ ಲಿಂಗಯೋಗಾನಂತರಂ, ತತ್ತಲ್ಲಿಂಗಾಗ್ನೌ ಶರೀರತ್ರಯಾರ್ಪಣಪ್ರಶಮಿತ ಶರೀರಪ್ರಮಾತೃತ್ವ ಬುದ್ಧಿಮಭ್ಯಸೇದಿತ್ಯರ್ಥಃ—ಏತಚ್ಚ" ಶರೀರಂ ಹವಿರಿತಿ" ಸೂತ್ರೇಣ ಸ್ಪಷ್ಟಮುಪದಿಷ್ಟಂ. ಉಕ್ತಂ ವಿಜ್ಞಾನ ಭೈರವೇಪಿ. ಮಹಾಶೂನ್ಯಾಲಯೇವಹ್ನೌ ಭೂತಾಕ್ಷ ವಿಷಯಾ

---

ಮುಕ್ತಾವಸ್ಥೆಯನ್ನು ಹೊಂದಿ ಪ್ರಥಿವೀಜಲಾದಿಗಳೆಂಬ ಪಂಚಭೂತಗಳಾಗಲೀ, ಪಂಚವಿಷಯಗಳಾಗಲೀ ಯಾವೂ ನನ್ನವಲ್ಲವೆಂಬ ದೃಢನಿಶ್ಚಯವುಳ್ಳವನಾಗುವನು. ಆಗ ಈ ಪೃಥಿವಿಯು ಇದರ ಗಂಧ ಗುಣವು ಆಧಾರಸ್ಥಾನವೃತ್ತಿಯಾದ ಆಚಾರಲಿಂಗದ ಪದಾರ್ಥಗಳಾದುದರಿಂದ ಈ ಪೃಥಿವೀ ಗಂಧಗಳನ್ನು ಆಚಾರ ಲಿಂಗಕ್ಕೆ ಸಮರ್ಪಣೆಯಂ ಮಾಡುತ್ತ, ಇದೇ ಮೇರೆಗೆ ಗುರುಲಿಂಗ ಪದಾರ್ಥವಾದುದರಿಂದ ಜಲವನ್ನು ಇದರ ವಿಷಯವಾದ ರಸವನ್ನೂ ಸ್ವಾಧಿಷ್ಠಾನದಲ್ಲಿರುವ ಗುರುಲಿಂಗಕ್ಕೆ ಸಮರ್ಪಣೆಯಂ ಮಾಡುತ್ತ, ಈ ರೀತಿಯಾಗಿ ತೇಜಸ್ಸು, ವಾಯು, ಆಕಾಶ ಇವುಗಳನ್ನು ಇವುಗಳ ಗುಣವೆನಿಸಿದ ರೂಪ, ಸ್ಪರ್ಶ, ಶಬ್ದಗಳನ್ನೂ, ಮಣಿಪೂರಕ, ಅನಾಹತ ವಿಶುದ್ಧಿಯೆಂಬ ಚಕ್ರಗಳಲ್ಲಿ ವಾಸವಾಗಿರುವ ಶಿವಲಿಂಗ, ಜಂಗಮಲಿಂಗ, ಪ್ರಸಾದಲಿಂಗ, ಮಹಾಲಿಂಗಗಳಿಗೆ ಸಮರ್ಪಣೆಯಂ ಮಾಡುತ್ತ, ಎಲ್ಲವನ್ನು ಪ್ರಸಾದರೂಪದಿಂ ಭಾವಿಸುತ್ತಿರುವನು. ಈ ರೀತಿಯಾಗಿ ಅಭ್ಯಾಸ ಮಾಡಿ, ಪೃಥಿವ್ಯಾದಿ ಪಂಚಭೂತಗಳನ್ನು ಆಚಾರಾದಿ ಲಿಂಗಗಳಲ್ಲಿ ಸಮರ್ಪಣೆಯಂ ಮಾಡಿದ ಲಯಯೋಗಸಂಪನ್ನನಾದ ಮುಕ್ತಾತ್ಮನಿಗೆ ಪ್ರಪಂಚದಲ್ಲಿರುವ ಪೃಥಿವಿಯ ಸಂಬಂಧವಾದಪ್ರಾಣಿ ಜಲಸಂಬಂಧವಾದಪ್ರಾಣಿ ಮೊದಲಾದ ಸಕಲ ಪ್ರಾಣಿಗಳೂ ವಶವಾಗುವವು.

ದಿಕಂ| ಹೂಯತೆ ಮನಸಾಸಾಕಂ ಸಹೋಮಸ್ಸ್ರುಕ್ಚ ಚೇತನಾ" ಇತಿ. ಗೀತಂಚ ಕೃಷ್ಣೇನಾಪಿ—ಸರ್ವಾಣೀಂದ್ರಿಯಕರ್ಮಾಣಿ ಪ್ರಾಣಕರ್ಮಾಣಿಚಾಪರೆ | ಆತ್ಮ ಸಂಯಮಯೋಗಾಗ್ನೌ ಜುಹ್ವತಿಜ್ಞಾನದೀಪಿತೇ" ಇತಿ. ಉಕ್ತಂಚ ರೇಣುಕ ಭಗವತ್ಪಾದಾಚಾರ್ಯೈಃ" ಆತ್ಮಜ್ಯೋತಿಷಿ ಸರ್ವೇಷಾಂ ವಿಷಯಾಣಾಂ ಸಮರ್ಪಣಂ | ಅಂತರ್ಮುಖೇನ ಭಾವೇನ ಹೋಮಕರ್ಮೇತಿಗೀಯತೇ" ಇತಿ ಓಮಿತಿ ಬ್ರಹ್ಮವಾಚಕಂ. ಈಶಾನಃ ಸರ್ವವಿದ್ಯಾನಾ ಮೀಶ್ವರಸ್ಸರ್ವಭೂ ತಾನಾಂ ಬ್ರಹ್ಮಾಧಿಪತಿ ರ್ಬ್ರಹ್ಮಣೋಧಿಪತಿ ರ್ಬ್ರಹ್ಮಾ ಶಿವೋಮೇಽಸ್ತು ಸದಾಶಿವೋಂ" ಇತಿಚಶ್ರುತೇಃ. ಸ್ವರೂಪತಃ ತದ್ವ್ಯಾಪ್ಯಕ್ರತೌ ಕ್ರತುರ್ಯಜ್ಞಃ ತತ್ಕರ್ತೃತ್ವಾತ್" ಜೀವೋಪಿ ಕ್ರತುರಿತಿ ಲಕ್ಷ್ಯತೇ. ಯದ್ವಾತಮಕ್ರತುಂ

---

ಈ ಪ್ರಕಾರ ಆಯಾಯ ಭೂತಗಳನ್ನು ಆಯಾಯ ಗುಣಗಳನ್ನು ಆಚಾರಾದಿ ಲಿಂಗಗಳಿಗೆ ಸಮರ್ಪಣೆಯಂ ಮಾಡಿದನಂತರ ಬಂಧಕ್ಕೆ ಕಾರಣಗಳಾದ ಸ್ಥೂಲ ಸೂಕ್ಷ್ಮ ಕಾರಣ ದೇಹರೂಪವಾದ ಹವಿಸ್ಸನ್ನು ತನ್ನ ಅಭಿವ್ಯಕ್ತವಾದ ಸಚ್ಚಿದಾನಂದ ಲಿಂಗಾಗ್ನಿಯಲ್ಲಿ ಸುಟ್ಟು ಬೂದಿಮಾಡುವನು. ಅಂದರೆ—ಲಿಂಗಭೋಗೋಪಭೋಗಿಯಾದ ಶಿವಯೋಗಿಯು ನಾನು ನನ್ನ ದೇಹವು ಎಂಬ ರಾಗದ್ವೇಷಮೂಲಕವಾದ ಶರೀರಾಭಿಮಾನವನ್ನು ಬಿಟ್ಟು ಶುದ್ಧಾತ್ಮನಾದ ಮಹಾಲಿಂಗದಲ್ಲಿ ಸಮರಸಭಾವವನ್ನು ಹೊಂದಿ ಮುಕ್ತಾತ್ಮನಾಗುವನೆಂದು ತಾತ್ಪರ್ಯಾರ್ಥವು. ಲೋಕದಲ್ಲಿ ಉರಿಯುತ್ತಿರುವ ಬೆಂಕಿಯಲ್ಲಿ ಹಾಕಿದ ಕಟ್ಟಿಗೆಗಳೆಲ್ಲವು ಸುಟ್ಟು ಬೂದಿಯಾದಮೇಲೆ ಆ ಕಟ್ಟಿಗೆಯ ಕಾರ್ಯವೆಲ್ಲವೂ ನಷ್ಟವಾಗಿ ಆ ಕಟ್ಟಿಗೆಯ ಭಿನ್ನಭಿನ್ನ ವಾಡಜಾತಿಗಳೂ ಹೆಸರಿಲ್ಲದಂತೆ ಹೋಗಿ ಕೇವಲ ಬೂದಿಯೊಂದರ ಜ್ಞಾನವುಂಟಾಗುವಂತೆಯೂ, ಪೃಥಿವ್ಯಾದಿ ವಿಕಾರವಾದ ಸಕಲವಿಷಯಗಳನ್ನೂ ಶಿವಲಿಂಗಕ್ಕೆ ಸಮರ್ಪಣೆಯಂ ಮಾಡಿದನಂತರ ಪ್ರಪಂಚದಲ್ಲಿರುವ ಪರಸ್ಪರ ಸೂನ್ಯಾತಿರೇಕವಾದ ಭೇದಬುದ್ಧಿಯು ನಷ್ಟವಾಗಿ ಅವಶಿಷ್ಟವಾದ ಶಿವಪ್ರಸಾದವಾಗಿಯೇ ಕಾಣುತ್ತಿರುವದು. ಈ ವಿಷಯದಲ್ಲಿ ಆಚಾರಾಯಾರ್ಪಿತಾಪೃಥಿವೀ" ಎಂಬುವ ಅನುಭವಸೂತ್ರವೂ, ಮಹಾಶೂನ್ಯಾಲಯೇವಹ್ನೌ" ಎಂಬ ವಿಜ್ಞಾನಶ್ವರೋಕ್ತಿಯೂ, ಸರ್ವಾಣೀಂದ್ರಿಯಕರ್ಮಾಣಿ" ಎಂಬ ಗೀತಾವಾಕ್ಯವೂ, ಆತ್ಮಜ್ಯೋತಿಷಿಸರ್ವೇಷಾಂ" ಎಂಬ ಸಿದ್ಧಾಂತಶಿಖಾಮಣಿಯೂ ಇವೇ ಮೊದಲಾದ ಗ್ರಂಥಗಳು ಪ್ರಮಾಣಗಳಾಗಿವೆ.



ಪಶ್ಯತಿ ವೀತಶೋಕೋ ಧಾತುಃ ಪ್ರಸಾದಾನ್ಮಹಿಮಾನಮಾತಂ" ಇತ್ಯತ್ರಾ ಕ್ರತುಶಬ್ದಸ್ಯ ಕ್ಲೇಶಕರ್ಮಾದ್ಯಪರಾ ಮೃಷ್ಟಾರ್ಥವಾಚಕತ್ವಾತ್" ತಸ್ಯಪರಾ ಭಿಮತತ್ವಾತ್" ಕ್ರತುಶಬ್ದಸ್ಯ ತತ್ಪರಾಮೃಷ್ಟಾರ್ಥ ಜೀವವಾಚಕತ್ವಾತ್, ಹೇ ಜೀವ ಮುಮುಕ್ಷೋ; ಕೃತಂ ಮೋಕ್ಷಾರ್ಥಮನುಷ್ಠಿತಂ ಯೋಗಾಭ್ಯಾಸಾದಿಕಂ ವೈದಿಕಂಕರ್ಮ. ಈಶ್ವರಾರ್ಪಿತಮೇವ, ಸ್ಮರ ಭಾವಯ, ಆರಭ್ಯಕರ್ಮಾಣಿ ಗುಣಾನ್ವಿತಾನಿ ಭಾವಾಂಶ್ಚ ಸರ್ವಾನ್ವಿನಿಯೋಜಯೇದ್ಯಃ | ತೇಷಾಮಭಾವೆ ಕೃತಕರ್ಮನಾಶಃ" ಕರ್ಮಕ್ಷಯೇ ಯಾತಿ ಸತತ್ವತೋನ್ಯಃ" ಇತಿಶ್ರುತೇಃ. ಶಿವೆ ನಿವೇಶ್ಯ ಸಕಲಂ ಕಾರ್ಯಾಕಾರ್ಯವಿವೇಕತಃ | ವರ್ತತೆ ಯೋಮಹಾಭಾಗಃ ಸ ಸಂಗ ರಹಿತೋಭವೇತ್" ಇತಿ ಸಿದ್ಧಾಂತಶಿಖಾಮಣ್ಯುಕ್ತೇಶ್ಚ. ಕಿಂಚ ಹೇಕ್ರತೋ ಜೀವಕೃತಂ. ಗುರುಲಿಂಗಜಂಗಮ ತೃಪ್ತ್ಯರ್ಥ ಮನುಷ್ಠಿತಂ ವ್ಯಾವಹಾರಿಕಮಪಿ ಕರ್ಮ ಯದ್ವರ್ತತೆ. ತದಪಿ ಶಿವಾರ್ಪಿತಮೇವ ಸ್ಮರ ಭಾವಯ" ಸ್ಮರಸ್ಮರೇತಿ

---

ಮತ್ತು ಮೋಕ್ಷವನ್ನು ಬಯಸುತ್ತಿರುವ ಜೀವಾತ್ಮರು ತನ್ನ ಮೋಕ್ಷೋಪಯುಕ್ತ ಕರ್ಮಗಳನ್ನೂ, ಗುರು ಲಿಂಗ ಜಂಗಮರ ತೃಪ್ತ್ಯರ್ಥವಾಗಿ ಆಚರಿಸುತ್ತಿರುವ ವ್ಯವಹಾರಕರ್ಮಗಳನ್ನೂ, ಶಿವಲಿಂಗಾರ್ಪಿತಗಳನ್ನಾಗಿಯೇ ಭಾವಿಸುತ್ತಿರುವನು. ಈ ವಿಷಯದಲ್ಲಿ 'ಆರಭ್ಯಕರ್ಮಾಣಿ' ಎಂಬಶ್ರುತಿಯು 'ಶಿವೇನಿವೇಶ್ಯಸಕಲಂ' ಎಂಬ ಸಿದ್ಧಾಂತಶಿಖಾಮಣಿಯು ಪ್ರಮಾಣವು. ಇದರಿಂದ ಈಮಂತ್ರದ ಮುಖ್ಯ ತಾತ್ಪರ್ಯವೇನಂದರೆ;—ಸಮುದ್ರದಲ್ಲಿ ಅನೇಕವಾದ ತರಂಗಗಳು ತೋರಿ ಲಯವಾಗುತ್ತಿರುವಂತೆ ಸಮಸ್ತಭೂತಗಳಾದ ಪೃಥಿವ್ಯಾದಿಗಳನ್ನು ಭೌತಿಕಗಳಾದ ಶರೀರಗಳನ್ನು ಸಮರ್ಪಣರೂಪವಾದ ಲಯಚಿಂತನೆಯಂ ಮಾಡುತ್ತ ಸುಟ್ಟುಹೋದ ಅರಳಿಯಲ್ಲಿ ಅರಳಿಯೆಂಬ ಜ್ಞಾನವು ಹೋಗಿ ಬೂದಿಯೆಂಬ ಬುದ್ಧಿಯೇ ಹುಟ್ಟುವಂತೆ ಸಕಲಪದಾರ್ಥಗಳು ಶಿವಯೋಗಿಯ ದೃಷ್ಟಿಯಲ್ಲಿ ಶಿವಮಯವಾಗಿಯೇ ಕಾಣುತ್ತಿರುವುದು. ಅಂದರೆ, ಲಿಂಗಾಂಗ ಸಾಮರಸ್ಯವುಳ್ಳ ಶಿವಯೋಗಿಗಳು ಪ್ರತಿನಿತ್ಯದಲ್ಲೂ ಆಯಾಯ ಪದಾರ್ಥಗಳನ್ನೆಲ್ಲಾ ಆಯಾಯ ಲಿಂಗಗಳಿಗೆ ಅರ್ಪಣೆಯಂ ಮಾಡುವವನಾಗಿ ಎಲ್ಲವನ್ನೂ ಶಿವಕಾರ್ಯವನ್ನಾಗಿಯೇ ಚಿಂತಿಸುವರೆಂದು ತಾತ್ಪರ್ಯವು. ಈ ಮಂತ್ರದಲ್ಲಿರುವ ಭಸ್ಮಾಂತ ಎಂಬುವುದಕ್ಕೆ ನಾವು ಹೇಳಿದ ಅಭಿಪ್ರಾಯವೇ ಸಂಗತವಾಗುವುದು. ಬೇರೆ ಅಭಿಪ್ರಾಯವಂ ಅಂಗೀಕರಿಸಿದಲ್ಲಿ 'ದಗ್ಧಸ್ಯದಹನಂನಾಸ್ತಿ' ಮೊದ

ಷ್ಣುಸರ್ವಜನಸಮಾದರಾರ್ಥ೦. ಇತ್ಥಂ ಪ್ರತ್ಯಹಂ ಪರಸ್ಮಿನ್ ಚಿದಗ್ನೌ ಅಂತರ್ಮು ಖೇನ ಭಾವೇನ ಭೂತಭೌತಿಕಾದಿ ಸರ್ವೇಷಾಂ ವಿಷಯಾಣಾಂ ಸಮರ್ಪಣ ರೂಪ ಲಯಚಿಂತನದಾರ್ಢ್ಯೇ' ಭಸ್ಮಾಂತತೂಲಾದೆ ಸ್ತತ್ಪೈನಾಗ್ರಹಣ ಮತದ್ರೂ ಪೇಣ ಗ್ರಹಣಮಿವ ಪ್ರಸಾದತ್ವೈನೈವ ಗ್ರಹಣಸ್ಥೈರ್ಯೇ ಮುಕ್ತೋಭವತೀತಿ ಮಂ ತ್ರತಾತ್ಪರ್ಯ೦. ಭಸ್ಮಾಂತಂ ಶರೀರಮಿತ್ಯಾದಿಕಂ ತಥೈವ ವ್ಯಾಖ್ಯೇಯಮನ್ಯ ಥಾ, ದಗ್ಧಸ್ಯದಹನಂನಾಸ್ತಿ ಪಕ್ವಸ್ಯಪಚನಂಯಥಾ | ಇತ್ಯಾಗಮಾದಿ ವಿರೋ ಧಸ್ಸ್ಯಾತ್, ಸ್ವಾಜ್ಞ ದಹನಸ್ವೀಕಾರೆ ಗೌರವೋಪಿ, ದಗ್ಧಸ್ಯಾಸ್ಯಸ್ಥ್ಯಾದೀನಾಂ ಭೂಖನನ ಜಲಸಮರ್ಪಣಾಪೇಕ್ಷಯಾ ಖನನಸ್ಯೈವ ಲಾಘವಾತ್, ಪಾರ್ಥಿ ವಸ್ಯ ಶರೀರಸ್ಯ ಪೃಥಿವ್ಯಾಮರ್ಪಣಸ್ಯ ಯುಕ್ತತ್ವಾಚ್ಚ, ತತ್ಪಂತತ್ವೇನಯೋ ಜಯೆ ದಿತ್ಯುಕ್ತತ್ವಾಚ್ಚ ||೧೭||

ಮೂ|| ಅಗ್ನೇ ನಯ ಸುಪಥಾ ರಾಯೆ ಅಸ್ಮಾನ್‌ವಿಶ್ವಾನಿ ದೇವ ವಯುನಾನಿ ವಿದ್ವಾನ್ | ಯುಯೋಧ್ಯಸ್ಮ ಜ್ಜುಹುರಾಣ ಮೇನೋ ಭೂಯಿಷ್ಠಾಂ ತೇ ನಮ ಉಕ್ತಿಂ ವಿಧೇಮ ||೧೮||

ಶಾಂ|| ಮೋಕ್ಷೋಪಾಯಾನುಷ್ಠಾನ ಸಾಮರ್ಥ್ಯ ಪ್ರಾರ್ಥನಾನಂತರ

---

ಲಾದ ಶಿವಾಗಮಗಳಿಗೆ ವಿರೋಧವುಂಟಾಗುವುದು. ಇದಲ್ಲದೆ ಮೃತಶರೀರಕ್ಕೆ ಮಾಡುವ ದಹನ ವಿಧಿಯು ಕೂಡಾ ಅಷ್ಟು ಪ್ರಶಸ್ತ ವಾಗಲಾರದು. ಯಾಕಂ ದರೆ, ಮೃತಶರೀರವನ್ನು ಸುಟ್ಟಮೇಲೆ ಆಶರೀರದ ಅಸ್ಥಿಗಳನ್ನು (ಮೂಳೆಗಳನ್ನು) ಭೂಮಿಯಲ್ಲಾಗಲಿ ಜಲದಲ್ಲಾಗಲಿ ಹಾಕಬೇಕಾಗುವದಷ್ಟೆ, ಆಮೇಲೆ ಭೂಮಿ ಯಲ್ಲಿ ಹಾಕುವುದಕ್ಕಿಂತ ಆ ಮೃತ ಶರೀರವನ್ನು ಮೊದಲೇ ಭೂಮಿಯಲ್ಲಿ ನಿಕ್ಷೇಪಮಾಡುವುದು ಸೂಕ್ತವಲ್ಲವೆ ? ಮತ್ತು 'ತತ್ಪಂತತ್ವೇನಯೋಜಯೆತ್' ಎಂಬ ಪ್ರಮಾಣಬಲದಿಂದ ಶರೀರವು ಪೃಥಿವೀ ಪ್ರಧಾನವಾದುದರಿಂದ ಮೃತ ಶರೀರವನ್ನು ಪೃಥಿವಿಯಲ್ಲಿ ಮರೆಮಾಡುವುದು ಒಳ್ಳೆಯದಲ್ಲವೇ? ಹೀಗೆ ವಿಚಾರ ದಿಂದಲೂ, ಪ್ರಮಾಣದಿಂದಲೂ ಸಿದ್ಧವಾಗುವಾಗ ಈಮಂತ್ರಕ್ಕೆ ದಹನಪರವಾಗಿ ಅರ್ಥಮಾಡುವುದು ಹ್ಯಾಗೆ ಸಂಭವವಾದೀತು ಎಂಬುವುದೇ ಈ ಮಂತ್ರ ವ್ಯಾ ಖ್ಯಾನದ ಅಭಿಪ್ರಾಯವು. ||೧೭||

ಅರ್ಥ—ದೇವ-ಆನಂದಾದಿ ಗುಣಗಳಿಂದ ಕೂಡಿದ, ಅಗ್ನೆ-ಅಗ್ನಿ ಶರೀರಾಂ



ಮಗ್ನ್ಯವಚ್ಛಿನ್ನ ಶಿವಂ ಭಗವಂತಂ ಮೋಕ್ಷಂ ಪ್ರಾರ್ಥಯತೆ, ಅಗ್ನ ಇತ್ಯಾದಿನಾ, ಹೇದೇವ ಕ್ರೀಡಾದಿಗುಣವಿಶಿಷ್ಟ, ಅಗ್ನೆ-ಅಗ್ನ್ಯವಚ್ಛಿನ್ನ ಶಿವ, ರಾಯೆ ಮೋಕ್ಷಲ ಕ್ಷಣಾಯ, ಅಸ್ಮಾನ್ ತ್ವತ್ಪ್ರಸಾದಾಸಕ್ತಾನ್, ಸುಪಥಾ ಗಮನಾಗಮನವರ್ಜಿ ತೇನ ಮಾರ್ಗೇಣ. ದಕ್ಷಿಣಾಯನವ್ಯಾವೃತ್ತೇನ, ನಯ ಪ್ರಾಪಯ, ಕೀದೃಶ ಸ್ತ್ವಂವಿಶ್ವಾನಿ ಸರ್ವಾಣಿ ವಯುನಾನಿ ಕರ್ಮಾಣಿ ವಿದ್ವಾನ್ ಜಾನನ್ ತ್ವಂಜುಹು ರಾಣಂ ಹೃಚ್ಛಾ ಕೌಟಿಲ್ಯ ಇತಿಧಾತೋಃ ಕುಟಿಲಮಿತ್ಯರ್ಥಃ, ಏನಃ ಅಶುಭಕಾ ರ್ಮಮಲಂ ದುಃಖಾದ್ಯುತ್ಪಾದಕಂ, ಅಸ್ಮತ್ ಅಸ್ಮತ್ತಃ ಯುಯೋಧಿ ವಿನಾಶಯ ತೆ ತುಭ್ಯಂ, ಭೂಯಿಷ್ಠಾಂ ಬಹುತರಾಂ ನಮಉಕ್ತಿಂ ವಿಧೇಮ ಕುರ್ಯಾಮ. ಯದ್ವಾ ಅಗ್ನೇ ತೇಜಸ್ತತ್ವಾತ್ಮಕ ಶಕ್ತ್ಯವಚ್ಛಿನ್ನ ಶಿವಲಿಂಗ; ಜ್ವಲಾಯನಮಃ, ಜ್ವಲಲಿಂಗಾಯನಮಃ, ಇತಿಶ್ರುತೇಃ, ಯಏಕೋಽವರ್ಣೋ ಬಹುಧಾಶಕ್ತಿಯೊ ಗಾತ್ ಇತ್ಯಾರಭ್ಯ, ತದೆವಾಗ್ನಿಸ್ತದಾದಿತ್ಯ ಸ್ತದ್ವಾಯುಸ್ತದು ಚಂದ್ರಮಾಃ" ಇತ್ಯಾದಿಶ್ರುತೇಃ, ಸುಪಥಾಸುಷುಮ್ನಾ ಮಾರ್ಗೇಣ, ರಾಯೆ ಮುಕ್ತಿಲಕ್ಷಣಾಯ ಉಕ್ತಂಚ, ತನ್ಮಾರ್ಗಸ್ಯ ಮೋಕ್ಷಪ್ರಾಪಕತ್ವಂ" ಉದ್ಘಾಟಯೇತ್ಕವಾಟಂತು ಯಥಾಕಂಚುಕಯಾ ಹಠಾತ್, ಕುಂಡಲಿನ್ಯಾತಥಾಯೋಗೀ ಮೋಕ್ಷದ್ವಾರಂ

---

ತರ್ಗತನಾದ, ಎಲೈ ಶಿವನೆ! ರಾಯೆ--ಮೋಕ್ಷಕ್ಕೋಸ್ಕರವಾಗಿ, ಅಸ್ಮಾನ್--ನಿನ್ನ ಅನುಗ್ರಹಕ್ಕೆ ಪಾತ್ರರಾದ ನಮ್ಮನ್ನು, ಸುಪಥಾ-ಮೋಕ್ಷಮಾರ್ಗದಿಂದ, ನಯ-ಹೊಂದಿಸು. ವಿಶ್ವಾನಿ-ಸಮಸ್ತಗಳಾದ ವಯುನಾನಿ ಕರ್ಮಗಳನ್ನು, ವಿದ್ವಾನ್-ತಿಳಿಯುವುವನಾಗಿ, ಅಸ್ಮತ್-ನಮ್ಮ, ಜುಹುರಾಣಂ-ಕುಟಿಲವಾದ, ಎನಂ-ಮಲವ ನ್ನು ಯುಯೋಧಿ-ನಾಶಗೊಳಿಸು. ತೆ-ನಿನಗೆ ಭೂಯಿಷ್ಠಾಂ-ಅನೇಕಪ್ರಕಾರವಾದ ನಮಉಕ್ತಿಂ-ನಮಸ್ಕಾರಗಳನ್ನು ವಿಧೇಮ-ಮಾಡುವೆನು. ||೧೮||

ತಾ|| ಕ್ರೀಡಾನಂದಾದಿ ಗುಣಾಧಾರನಾಗಿಯೂ, ಅಗ್ನಿ ಶರೀರವುಳ್ಳವನಾ ಗಿಯೂ ಇರುವ ಎಲೈ ಪರಶಿವನೆ! ನಾನು ಜನನ ಮರಣಾತ್ಮಕವಾದೀ ಸಂಸಾರ ಚಕ್ರದಲ್ಲಿ ಸುತ್ತಿ ಸುತ್ತಿ ಅನೇಕವಿಧವಾದ ದುಃಖಗಳಿಗೀಡಾಗಿರುವೆನು, ಈ ದುಃ ಖಾಗ್ನಿಯು ನಿನ್ನ ಅನುಗ್ರಹವುಂಟಾಗುವ ವರಿವಿಗೂ ಶಾಂತವಾಗುವುದಿಲ್ಲವು. ಇದು ಶಾಂತವಾಗುವ ವರಿವಿಗೂ ವಿಶ್ರಾಂತಿ ಸೌಖ್ಯವು ದೊರೆಯುವಂತಿಲ್ಲವು. ಆದುದರಿಂದ ದೀನೋದ್ಧರಣೈಕ ಶೀಲನಾದ ಮಹಾಲಿಂಗವೇ ನಿನ್ನ ಕೃಪಾಮೃತ ಸೇಚನೆಯಿಂದ ನನ್ನ ತಾಪವನ್ನು ಶಾಂತಗೊಳಿಸಿ, ಉತ್ತರಾಯಣ ಪುಣ್ಯ

ವಿಭೇದಯೇತ್" ಇತಿ. ಉಕ್ಷ್ವಾರ್ಯನಮಃ, ಊರ್ಧ್ವಲಿಂಗಾಯನಮಃ" ಇತ್ಯು ಕ್ತಚಿಚ್ಛಕ್ತ್ಯವಚ್ಛಿನ್ನಸ್ಯ ಪರಶಿವತತ್ವಸ್ಯ ಸಾಮರಸ್ಯಾಯ, ತಾದರ್ಥ್ಯೆ ಚತುರ್ಥೀ ತದರ್ಥಂ, ನಯ ಪ್ರಾಪಯ, ಏತದುಕ್ತಂಭವತಿ, ಆಧಾರಸ್ವಾಧಿಷ್ಠಾನಗತಾಚಾ ರಲಿಂಗಂ ಗುರುಲಿಂಗಂಚೋಪಾಸ್ಯ ಮಣಿಪೂರಕ ಚಕ್ರಪ್ರವೇಶಾನಂತರಂ, ತತ್ರ ಸ್ಥಸ್ಯ ಶಿವಲಿಂಗಸ್ಯ ತೇಜಸ್ತತ್ವಾತ್ಮಕೇಚ್ಛಾ ಶಕ್ತಿವಿಶಿಷ್ಟತ್ವಾತ್, ತಚ್ಛಕ್ತಿವಿಶಿಷ್ಟ ಶಿವಲಿಂಗಸ್ಯ ಶಿವಯೋಗಿನ ಇವ ಭಕ್ತಕಲ್ಪದ್ರುಮರೂಪತ್ವಾತ್, ತಲ್ಲಿಂಗಮು ದ್ದಿಶ್ಯಾನಾಹತ ವಿಶುದ್ಧಾಜ್ಞಾ ಸಹಸ್ರಾರ ಶಿಖಾಪಶ್ಚಿಮ ಚಕ್ರಾಂತಸ್ಥಿತ ತತ್ತ ಲ್ಲಿಂಗ ಸಾಮರಸ್ಯಂ ಪ್ರಾಪಯ್ಯ. ಊರ್ಧ್ವಲಿಂಗಾಯನಮಃ" ಇತ್ಯಾದಿಶ್ರುತಿ ಸಿದ್ಧ ಸರ್ವತತ್ವೋರ್ಧ್ವಗತ ಚಿಚ್ಛಕ್ತ್ಯವಚ್ಛಿನ್ನ ಪರಶಿವತತ್ವಸಾಮರಸ್ಯಂ ಪ್ರಾಪ ಯೇತಿ ಪ್ರಾರ್ಥಯೇದಿತ್ಯಲಮತ್ರ ಶಿವಯೋಗರಹಸ್ಯೋದ್ಘಾಟನೇನ, ಶಿವ ಯೋಗಪ್ರದೀಪಿಕಾದೌ, ತದ್ಯೋಗಸ್ಯ ವಿಸ್ತರೇಣೋಕ್ತತ್ವಾತ್, ಇತಃ ಪರಂ ಊರ್ಧ್ವಲಿಂಗಪ್ರವೇಶ ಪ್ರತಿರೋಧಕಂ ಮಮ ಕಿಂಚಿತ್ಪಾಪಶೇಷಮಸ್ತಿಚೇತ್, ಸರ್ವಪ್ರಾಣಿ ಕರ್ಮಜ್ಞಸ್ತ್ವಮತಏವ, ಮತ್ಪಾಪಶೇಷಮಪಿ ಮತ್ತಃ ಪೃಥಕ್ಕುರು. ಇತ್ಯಾಹ. ವಿಶ್ವಾನೀತಿ-ವಿಶ್ವಾನಿ ಸಮಸ್ತಾನಿ, ವಯುನಾನಿ ಪ್ರಾಣಿನಾಂ ಶುಭಾ ಶುಭ ಕರ್ಮಾಣಿ, ವಿದ್ವಾನ್ ಜಾನನ್, ಅತ ಏವ ತ್ವಂ, ಅಸ್ಮಜ್ಜುಹುರಾಣಂ ಮಮ

---

ಮಾರ್ಗದಿಂದ ಕರೆದುಕೊಂಡು ಮೋಕ್ಷಸಾಮ್ರಾಜ್ಯದಲ್ಲಿ ಬಿಡು. ಎಲೈ ಸರ್ವ ವ್ಯಾಪಕನಾದ ಶಂಕರನೆ! ನೀನು ಸಕಲ ಪ್ರಾಣಿಗಳಿಂದ ಮಾಡಲ್ಪಟ್ಟ ಪುಣ್ಯ ಪಾಪ ಕರ್ಮಗಳನ್ನು ತಿಳಿದವನಾದುದರಿಂದ ಮೋಕ್ಷಮಾರ್ಗಕ್ಕೆ ತಡೆಯನ್ನು ಮಾಡುತ್ತಿರುವ ಯತ್ಕಿಂಚಿತ್ ಕರ್ಮಶೇಷಗಳೇನಾದರು ನನ್ನಲ್ಲಿದ್ದರೆ ಮುಕ್ತಿ ಪ್ರತಿಬಂಧಕವಾದ ಆ ಕರ್ಮಗಳನ್ನು ನಾಶಮಾಡು. ಪ್ರತಿಕ್ಷಣದಲ್ಲಿಯೂ ನಿನಗೆ ಅಪರಿಮಿತ ನಮಸ್ಕಾರಗಳನ್ನು ಮಾಡುತ್ತೇನೆ.

ಎಲೈ ಅಗ್ನಿತತ್ವಾತ್ಮಕವಾಗಿರುವ ಶಕ್ತಿಯಿಂದ ಕೂಡಿರುವ ಪರಮಾತ್ಮನೆ! ನಮ್ಮನ್ನು ಸುಷುಮ್ನಾಮಾರ್ಗದಿಂದ ಮೋಕ್ಷಸ್ಥಾನವನ್ನು ಸೇರಿಸು. (ಸುಷುಮ್ನಾ ನಾಡಿಯು ಮೋಕ್ಷಮಾರ್ಗವೆಂಬುಹ ವಿಷಯದಲ್ಲಿ ಉದ್ಘಾಟಯೆತ್ಕವಾಟಂತು" ಎಂಬುವುದೇ ಪ್ರಮಾಣವಾಗಿರುವುದು.) ಆಧಾರಸ್ಥಾನ ಸ್ವಾಧಿಷ್ಠಾನಸ್ಥಾನಗ ಳಲ್ಲಿರುವ ಆಚಾರಲಿಂಗ ಗುರುಲಿಂಗಗಳ ಉಪಾಸನೆಯಂ ಮಾಡುತ್ತ, ಮಣಿಪೂ ರಕ ಚಕ್ರವನ್ನು ಪ್ರವೇಶಿಸಿ, ಅಲ್ಲಿ ದೇದೀಪ್ಯಮಾನನಾಗಿ ಹೊಳೆಯುತ್ತಿರುವ



ಕುಟಿಲಂ, ವಂಚನಾತ್ಮಕ ಮೂರ್ಧ್ವಲಿಂಗ ಪ್ರವೇಶ ಪ್ರತಿರೋಧಕಮಿತ್ಯರ್ಥಃ. ಏನಃ ದುರದೃಷ್ಟಶೇಷಂ. ಯುಯೋಧಿ ವಿಯೋಜಯ. ವಿನಾಶಯೇತ್ಯರ್ಥಃ. ತೆ ತವ ನಮಉಕ್ತಿಂ ಭೂಯಿಷ್ಠಾಂ ನಮಸ್ಕಾರಪರಂಪರಾಂ. ವಿಧೇಮ, ಕುರ್ಯಾಮ ಬಹುವಿತ್ತ ವ್ಯಯಾಯಾಸ ಸಾಧ್ಯ ನಮೋಽನ್ಯತ್ತ್ವತ್ಸೇವಾಯಾ ಮಸಮರ್ಥಾಃ ಸ್ಮಃ. ತಸ್ಮಾದ್ಭಕ್ತವತ್ಸಲಸ್ತ್ವಂ ವತ್ಸವತ್ಸಲತಯಾ ಗೌರಿವಮನ್ಮಲಪಂಕಾನ್ಯ ಪೋಹ್ಯರಕ್ಷೇತ್ಯರ್ಥಃ" ||೧೮||

ಇತಿ—ಶ್ರೀಮದುಜ್ಜಯನೀ ಸದ್ಧರ್ಮ ಸಿಂಹಾಸನಾಧೀಶ್ವರ ಜಗದ್ಗುರು ಚರಪಟ್ಟಾ<br>
ಧ್ಯಕ್ಷ ಸಿದ್ಧಲಿಂಗರಾಜ ದೇಶಿಕೇಂದ್ರ ಮಹಾಸ್ವಾಮಿನಾಂ ಸಂಸ್ಥಾನಾಸ್ಥಾನ<br>
ಪಂಡಿತೇನ ಮಹಿಶೂರ ಶ್ರೀಮನ್ಮಹಾರಾಜಾಸ್ಥಾನ ವಿದ್ವಜ್ಜನಪ್ರದತ್ತ<br>
ಪ್ರಶಸ್ತಿಯುತೇನ ಧರ್ಮರತ್ನಪದ ವಿಭೂಷಿತೇನ ಧಾರವಾಡಜಿಲ್ಲಾ<br>
ಹುಬ್ಬಳ್ಳಿಪ್ರದೇಶಾಂತರ್ಗತ ಉಮಚಿಗಿ ಪುರಮಧ್ಯವಿದ್ಯೋತಮಾ<br>
ನವರಿಷ್ಠ ಮಠಾಧಿಪ ಶ್ರೀಮದಯ್ಯಪ್ಪಾರ್ಯ ಪುತ್ರೇಣ<br>
ಶಂಕರಶಾಸ್ತ್ರಿಣಾ ವಿದುಷಾ ವಿರಚಿತೇಯಂ ಈಶಾವಾ<br>
ಸ್ಯೋಪನಿಷಚ್ಛಾಂಕರೀವ್ಯಾಖ್ಯಾ<br>
ಸಮಾಪ್ತಾ.

---

ಶ್ಲೋ|| ಉಮಚಿಗಿಪುರವಾಸೀ ಶಂಕರ ಶ್ಶಾಂತಿಯುಕ್ತಃ<br>
ಪರಶಿವ ಪದಪದ್ಮೇಚಾಯ್ಯಪಾರ್ಯಸ್ಯಪುತ್ರಃ ||<br>
ಸ್ತುತಗುರುರಹಮೇನಾಂ ಶಾಂಕರೀ ರತ್ನಮಾಲಾಂ<br>
ವರಗುಣಪರಯುಕ್ತಿಂ ನಿಕ್ಷಿಪಾಮ್ಯದ್ಯಭಕ್ತ್ಯಾ ||

|| ಇತಿ ಶಿವಂ ||

ಋತುಲೋಕ ವಸುಬ್ರಹ್ಮ ಮಿತೇಽಬ್ದೇ ಶಾಲಿವಾಹನೇ |<br>
ವೈಶಾಖಮಾಸಿ ಪಂಚಮ್ಯಾಂ ವ್ಯಾಖ್ಯೇಯಂ ಪ್ರಾಪ ಪೂರ್ಣತಾಂ ||<br>
ಶಾಲಿವಾಹನಶಕ ೧೮೩೬.



---

ಭಕ್ತರ್ಗೆ ಕಲ್ಪವೃಕ್ಷಪ್ರಾಯವಾದ ಇಚ್ಛಾಶಕ್ತಿಯಿಂದೊಡಗೂಡಿದ ಶಿವಲಿಂಗ ವನ್ನು ಸ್ವಾಭೇದದಿಂದಾರಾಧಿಸಿ, ಮುಂದೆ ಅನಾಹತ, ವಿಶುದ್ಧಿ ಆಜ್ಞಾ,

ಸಹಸ್ರಾರ, ಶಿಖಾ ಪಶ್ಚಿಮಚಕ್ರಗಳಲ್ಲಿರುವ ಆಯಾಯ ಲಿಂಗಗಳೊಡನೆ ಸಮರಸ ಭಾವವನ್ನುಂಟುಮಾಡುವುದಲ್ಲದೆ, ಪೃಥಿವ್ಯಾದಿ ಸಕಲ ತತ್ವಗಳ ಆಚೆಯಲ್ಲಿರುವ ಮುಪ್ಪತ್ತಾರನೆಯದಾದ ಚಿಚ್ಛಕ್ತ್ಯವಚ್ಛಿನ್ನವಾದ ಪರಶಿವ ಲಿಂಗದಲ್ಲಿ ನದಿಗಳು ಸಮುದ್ರದಲ್ಲಿ ಶೇರಿ ಏಕಾಕಾರವಾಗಿರುವಂತೆ ಸಮರಸಭಾವವನ್ನುಂಟುಮಾಡು. ಎಲೈ ಭಕ್ತವತ್ಸಲನಾದ ಶಿವನೆ! ನಿನಗೆ ಭಾರಿಭಾರಿಗೂ ಪರಸಹಸ್ರ ನಮಸ್ಕಾರ ಗಳನ್ನು ಮಾಡಬಲ್ಲೆನಲ್ಲದೆ ಇನ್ನಾವುದನ್ನೂ ಕೊಡುವ ಸಾಮರ್ಥ್ಯವು ನನಗಿಲ್ಲವು. ಆದರೂ ನನ್ನಲ್ಲಿ ಮಾತೃವಾತ್ಸಲ್ಯವಂ ಇಟ್ಟು ಕಾಪಾಡು. ಲೋಕದಲ್ಲಿ ಹಸುವು ತನ್ನ ಕರುವಿನ ಮೇಲಿನ ಸಹಜವಾದ ಪ್ರೀತಿಯಿಂದ ಆ ಕರುವಿನ ಶರೀರಕ್ಕೆ ಅಂಟಿಕೊಂಡಿರುವ ಕೊಳೆಯನ್ನೆಲ್ಲಾ ನಾಶಮಾಡಿ ಆ ಕರುವಿಗೆ ಸ್ತನ್ಯವನ್ನು ಕೊಟ್ಟು ಕಾಪಾಡುವುದಲ್ಲವೆ; ಇದೇಮೇರೆಗೆ ನನ್ನ ತಪ್ಪುಗಳನ್ನು ಲಕ್ಷ್ಯಕ್ಕೆ ತಂದುಕೊಳ್ಳದೆ, ನನ್ನಿಂದ ಶೇಖರಿಸಲ್ಪಟ್ಟ ಸಮಸ್ತವಾದ ಕರ್ಮರಾಶಿಯನ್ನೆಲ್ಲಾ ನಾಶಗೊಳಿಸಿ ಅಮೃತವನ್ನು ಕೊಟ್ಟು ಕಾಪಾಡು. ನೀನಲ್ಲದೆ ನನಗೆ ಮತ್ತಿನ್ನಾರೂ ರಕ್ಷಕರಿಲ್ಲವು. ||೧೮||

ಎಂಬಲ್ಲಿಗೆ ಶ್ರೀಮಜ್ಜಗದ್ಗುರು ಉಜ್ಜಯನೀ ಸಂಸ್ಥಾನ ಆಸ್ಥಾನ ಪಂಡಿತರಾದ
ಧರ್ಮರತ್ನ ಎಂಬ ಪ್ರಶಸ್ತಿಯಂ ಪಡೆದ ಉಮಚಿಗಿ ಶಂಕರಶಾಸ್ತ್ರಿಗಳಿಂದ
ಸಂಸ್ಕೃತ ಭಾಷೆಯಲ್ಲಿ ರಚಿಸಲ್ಪಟ್ಟ ಶಾಂಕರೀ ಎಂಬ ಗ್ರಂಥಕ್ಕೆ
ಸಿರಸಿ ಪಂ|| ಗುರುಶಾಂತಶಾಸ್ತ್ರಿಗಳಿಂದ ಬರಿಯಲ್ಪಟ್ಟ
ಕರ್ಣಾಟಕ ತಾತ್ಪರ್ಯವು ಸಮಾಪ್ತವಾದುದು.
ಭದ್ರಂ ಭೂಯಾತ್.
ಹರಿಃ ಓಂ.

---

ಶ್ಲೋ|| ವ್ಯಾಖ್ಯಾಯಾ ಶ್ಯಾಂಕರ್ಯಾಃ
ಸಿರಸೀ ಗುರುಶಾಂತಶಾಸ್ತ್ರಿಣಾ ರಚಿತಂ ||
ಕರ್ಣಾಟಕ ತಾತ್ಪರ್ಯಂ
ಶಿವಪಾದ ಸರೋರುಹಾರ್ಪಿತಂ ಜೀಯಾತ್ ||



# ಶುದ್ಧಾಶುದ್ಧಪತ್ರಿಕಾ.

| ಪುಟ. | ಪಂಕ್ತಿ | ಅಶುದ್ಧ. | ಶುದ್ಧ. |
|---|---|---|---|
| ೧ | ೨೫ | ಮಾರುಲಿಂಗ | ಮೂರುಲಿಂಗ |
| ೬ | ೫ | ಸ್ಕಂದ | ಸ್ಥಂದ |
| ೬ | ೭ | ಮುಚ್ಚ್ಯೈರನ್ | ಮುಚ್ಚೀರನ್ |
| ೭ | ೧೪ | ಸಂಸಾರಂಗೆ | ಸಂಸಾರ್ಯಂಗೆ |
| ೯ | ೧೨ | ದೀಕ್ಷಿತಂಪುತ್ರಂ | ದೀಕ್ಷಿತಂಶಿಷ್ಯಂಪುತ್ರಂವಾ |
| ೧೨ | ೧೧ | ಸಹ | ಸಃ |
| ೧೪ | ೧೨ | ನದೀಕ್ಷಿತಾಂ | ಯೇನದೀಕ್ಷಿತಾಃ |
| ೧೬ | ೯ | ಆಶನಂಚ | ಅನಶನಂಚ |
| ೧೮ | ೧೫ | ಪರೋಕ್ತ | ಪೂರ್ವೋಕ್ತ |
| ೧೯ | ೧೦ | ಶಿನಾ,, | ಜನಾಃ |
| ೨೦ | ೧೨ | ತೈರಪ್ಯಶಕ್ತ | ಕೈರಪ್ಯಶಕ್ತ |
| ೨೧ | ೧ | ಒಷ್ಯಾನೇಷ್ಯ | ಷ್ಯಾಒನೆಂಗ್ಯಸಂಬವಾತ್ |
| ೨೧ | ೨ | ಪುರುಷಾರ್ಥಸಿದ್ಧಿ | ಪುರುಷಾರ್ಥಾಸಿದ್ಧಿ |
| ೨೧ | ೨ | ತಸಾತ್ವಾಂಗೆ | ತಸ್ಮಾತ್ವಾಂಗೆ |
| ೨೧ | ೧೪ | ಶೋವಾರ್ವತ | ಕೋವಾರ್ವಕ |
| ೨೧ | ೧ | ಮಂಗಾನನು | ಮಂಗಾನಾಮನನು |
| ೨೨ | ೧೬ | ತದಜ್ಞಾನ | ತತ್ಜ್ಞಾನ |
| ೨೪ | ೨ | ಜನಾತಿಇತಿ | ಜನಾಇತಿ |
| ೨೫ | ೪ | ನಾತಷಯೊವೋಕ್ಷಃ | ನಾಶಸ್ತಯೊರ್ಮೋಕ್ಷಃ |
| ೨೬ | ೧ | ಮೋಕ್ಷಸ್ಯಪುರುಷಾರ್ಥತ್ವ | ಮೋಕ್ಷಸ್ಯಾಪುರುಷಾರ್ಥತ್ವ |
| ೨೯ | ೭ | ಮಾತರಿಶ್ವಾ | ಮಾತರಿಶ್ವಾ |
| ೪೪ | ೬ | ನಿವೃತ್ತಿರೆವ | ನಿವೃತ್ತಿರಿವ |
| ೪೫ | ೧ | ಬ್ರಹ್ಮಾನಂದ | ಪರಮಾನಂದ |
| ೫೨ | ೪ | ಇತ್ಯಾದಿನನಯಂ | ಇತ್ಯಾದಿನಾನವಯಂ |
| ೫೨ | ೭ | ಈಶ್ವರಾರ್ಪಣಬುಧ್ಯಾಪಜೀವಿಭ್ಯಾಂ ಫಲಾಭಿಸಂಧಿರಹಿತಾಭ್ಯಾಂ ಈಶ್ವರಾರ್ಪಣಬುದ್ಧ್ಯಾಪಜೀವಿಭ್ಯಾಂ ಫಲಾಭಿಸಂಧಿರಹಿತಾಭ್ಯಾಂ | ಈಶ್ವರಾರ್ಪಣಬುಧ್ಯಾಪಜೀವಿಭ್ಯಾಂ ಫಲಾಭಿಸಂಧಿರಹಿತಾಭ್ಯಾಂ |
| ೫೫ | ೨ | ಸಂತ್ಯಾಗಾನ್ನಮೋಕ್ಷಂ | ಸಂತ್ಯಾಗಾನ್ಮೋಕ್ಷಂ |
| ೬೬ | ೧೦ | ಕುಮಾರಿ | ಕುಮಾರೀ |
| ೬೭ | ೨ | ತಶಃ | ತತಃ |
| ೭೨ | ೧೦ | ಭಕ್ತಿ | ಭಕ್ತ |



Dharmaratna Padavidharaha
PANDITA SANKARA SASTRI, UMACHIGI.

ಧರ್ಮರತ್ನ ಪದವೀಧರಃ
ಪಂ. ಶಂಕರ ಶಾಸ್ತ್ರೀ, ಉಮಚಿಗಿ

ಈ ಗ್ರಂಥವನ್ನು ಅಪೇಕ್ಷಿಸುವವರು ಕೆಳಗಿನ ವಿಳಾಸಗಳಿಗೆ ಬರೆದು ತರಿಸಿಕೊಳ್ಳತಕ್ಕದ್ದು.

---

ಎ. ವೀರಯ್ಯನವರು, ಪುಳಿಮಠ ಉಮಚಿಗಿ.

ತಾಲ್ಲೋಕು—ಹುಬ್ಬಳ್ಳಿ.

ಪೋಸ್ಟು—ಶಿರಗುಪ್ಪೆ.

ಮುಕ್ಕಾಂ—ಉಮಚಿಗಿ.

---

ರುದ್ರಸ್ವಾಮಿ ಮಠದಲ್ಲಿರುವ ಗವಾಯಿ ಶಿವಲಿಂಗಯ್ಯನವರು.

ಜಿಲ್ಲಾ—ವಿಜಾಪೂರ.

ತಾಲ್ಲೋಕು—ಬಾಗೇವಾಡಿ.

ಪೋಸ್ಟ<br>ಮುಕ್ಕಾಂ } ನಿಡಗುಂದಿ.

---

ಎ. ಆರ್. ಶಿವನಾಗಪ್ಪ, ಬುಕ್ ಸೆಲರ್, ಹುಬ್ಬಳ್ಳಿ.